ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಪವಿತ್ರ ಕುರ್‌ಆನಿನ ಹೆಚ್ಚಿನ ಕಡೆಗಳಲ್ಲಿ ನಮಾಝ್ ಮತ್ತು ಝಕಾತನ್ನು ಒಟ್ಟೊಟ್ಟಿಗೆ ಪ್ರಸ್ತಾಪಿಸಲಾಗಿದೆ. ನಮಾಝ್ ಅಲ್ಲಾಹನ ಹಕ್ಕಾದರೆ ಝಕಾತ್ ದಾಸರ ಹಕ್ಕಾಗಿದೆ. ಝಕಾತ್ ಮಾನವರನ್ನು ಶುದ್ಧೀಕರಿಸುವ ಒಂದು ಆರಾಧನಾ ಕರ್ಮವಾಗಿದೆ. ಅದು ಮಾನವನ ಮನಸ್ಸಿನ ಸಂಕುಚಿತತೆ, ಧನಮೋಹ, ಜಿಪುಣತೆ, ಸಿರಿವಂತಿಕೆಯ ಕುರಿತಾದ ಅಹಂಭಾವ, ಬಡವರೊಂದಿಗಿನ ತಿರಸ್ಕಾರ ಮುಂತಾದ ರೋಗಗಳನ್ನು ಹೋಗಲಾಡಿಸುತ್ತದೆ. ಅದರ ಸ್ಥಾನದಲ್ಲಿ ಔದಾರ್ಯ, ಅನುಕಂಪ, ನಿರಪೇಕ್ಷತೆ, ನಯ-ವಿನಯ ಮುಂತಾದ ಉದಾತ್ತ ಗುಣಗಳನ್ನು ಬೆಳೆಸುತ್ತದೆ.

ಭಾರತ ಉಪಭೂಖಂಡದ ಪ್ರಖ್ಯಾತ ವಿದ್ವಾಂಸರೂ ಸ್ವತಂತ್ರ ಭಾರತದ ಪ್ರಥಮ ಶಿಕ್ಷಣ ಸಚಿವರೂ ಆಗಿದ್ದ ಮೌ| ಅಬುಲ್ ಕಲಾಮ್ ಆಝಾದ್‌ರವರು ಝಕಾತ್ ವ್ಯವಸ್ಥೆಯ ಕುರಿತು ಮಾಡಿದ ಭಾಷಣವನ್ನು 'ಹಕೀಕತೆ ಝಕಾತ್' ಎಂಬ ಹೆಸರಿನಲ್ಲಿ ಕೃತಿಗಿಳಿಸಲಾಗಿತ್ತು. ಈ ಉರ್ದು ಕೃತಿಯ ಕನ್ನಡಾನುವಾದವೇ 'ಝಕಾತ್‌ನ ವಾಸ್ತವಿಕತೆ' ಎಂಬ ಈ ಕೃತಿ. ಇದನ್ನು ಕೆ.ಎಂ. ಅಶ್ರಫ್‌ರವರು ಸುಂದರವಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಪವಿತ್ರ ಕುರ್‌ಆನಿನಲ್ಲಿ ಝಕಾತ್‌ನ ಹಕ್ಕುದಾರರೆಂದು ಹೇಳಲಾಗಿರುವ ಎಂಟು ವಿಭಾಗಗಳ ಕುರಿತು ಇದರಲ್ಲಿ ಸಮಗ್ರವಾಗಿ ಚರ್ಚಿಸಲಾಗಿದೆ. ಸಮುದಾಯವು ಮರೆತು ಬಿಟ್ಟಿರುವ ಅಥವಾ ನಿರ್ಲಕ್ಷಿಸಿರುವ ಝಕಾತ್‌ನ ಸಾಮೂಹಿಕ ಸಂಗ್ರಹ ಮತ್ತು ವಿತರಣೆಯ ಅಗತ್ಯದ ಕುರಿತು ಈ ಕೃತಿಯು ಬೆಳಕು ಚೆಲ್ಲಿದೆ.

ಝಕಾತ್‌ನ ಸಂಗ್ರಹ ಮತ್ತು ವಿತರಣೆಯ ವ್ಯವಸ್ಥೆಯನ್ನು ಸ್ಥಾಪಿಸಬೇಕಾದುದು ಆಡಳಿತ ವ್ಯವಸ್ಥೆಯ ಕೆಲಸವೆಂಬುದು ಸರಿ. ಅಂತಹ ವ್ಯವಸ್ಥೆ ಇಲ್ಲದ ಇಸ್ಲಾಮೇತರ ರಾಷ್ಟ್ರಗಳಲ್ಲಿ ಮುಸ್ಲಿಮ್ ಸಮುದಾಯ ಈ ಕರ್ತವ್ಯದಿಂದ ಮುಕ್ತವಾಗುವುದಿಲ್ಲ. ಸಮುದಾಯವೇ ಅಲ್ಲಲ್ಲಿ ಸಂಘ-ಸಂಸ್ಥೆಗಳನ್ನು ರಚಿಸಿ ಝಕಾತ್ ಸಂಗ್ರಹಿಸಿ ವಿತರಿಸಬೇಕೆಂದು ಮೌ| ಆಝಾದ್ ಒತ್ತಿ ಹೇಳಿದ್ದಾರೆ. ಈ ರೀತಿಯ ವ್ಯವಸ್ಥೆಯನ್ನು ಜಾರಿಗೊಳಿಸಿದರೆ ಸಮುದಾಯವು ಸ್ವಾವಲಂಬಿಯೂ ಸುಭಿಕ್ಷವೂ ಆಗುವುದು. ಅದರ 'ಬರ್ಕತ್' ಶೀಘ್ರವೇ ಪ್ರಕಟವಾಗಬಹುದೆಂಬುದು ಸಮುದಾಯಕ್ಕೆ ಅವರ ಸಲಹೆ. ಆದ್ದರಿಂದ ಝಕಾತ್‌ನ ಮಹತ್ವ ಮತ್ತು ಅಗತ್ಯದ ಕುರಿತು ಹೆಚ್ಚಿನ ಅಧ್ಯಯನಕ್ಕೆ ಈ ಕೃತಿ ಪ್ರೇರಕವಾಗಲೆಂದು ಹಾರೈಸುತ್ತೇವೆ.

ಡಾ. ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# ಲೇಖಕರ ಮಾತು

## ಹೃದಯದ ಲೋಕ ಮತ್ತು ಕಿವಿಯ ಮಧ್ಯೆ ಅಂತರ

ಈ ಹಿಂದೆ ನನ್ನ ಧ್ವನಿ ಈ ಮೈದಾನದ ಒಂದು ಸೀಮಿತ ಪರಿಧಿಯ ತನಕ ಮಾತ್ರ ತಲುಪುತ್ತಿತ್ತು. ಕಳೆದ ಹಲವು ವರ್ಷಗಳಿಂದ ಸಂಸ್ಥೆಯ ಪ್ರಯತ್ನ ಮತ್ತು ವಿಜ್ಞಾನದ ಪ್ರಮುಖ ಪ್ರಯೋಜನಕಾರಿ ಸಂಶೋಧನೆಯ ಕಾರಣ ಈ ಸಲ ನನಗೆ ಮನವರಿಕೆ ಮಾಡಿಸಿದ ಪ್ರಕಾರ ನನ್ನ ಧ್ವನಿ ಭಾರತದ ಮೂಲೆ ಮೂಲೆಗೆ ತಲುಪುತ್ತಿದೆ. ಮಾತ್ರವಲ್ಲ ಹಿಮಾಲಯದ ಶಿಖರಗಳಾಗಲಿ, ಸಮುದ್ರದ ಅಲೆಗಳಾಗಲಿ, ಮರುಭೂಮಿಯ ಕೊಕ್ಕರೆಗಳೂ ನನ್ನ ಧ್ವನಿಯನ್ನು ತಡೆಯುತ್ತಿಲ್ಲವೆಂದು ಖಾತರಿ ನೀಡಲಾಗಿದೆ. ಮುಂಬೈ ಕಲ್ಕತ್ತಾದಿಂದ 1,300 ಮೈಲು, ಪೇಶಾವರ 1,500 ಮೈಲು ದೂರವಿದೆ. ಆದರೆ ನಾನು ನಿಮ್ಮಲ್ಲಿ ಕೇಳುತ್ತಿರುವುದೇನೆಂದರೆ, ನಿಮ್ಮ ಕಿವಿಯಿಂದ ನಿಮ್ಮ ಹೃದಯದ ಲೋಕ ಎಷ್ಟು ದೂರವಿದೆ? ನನ್ನ ಧ್ವನಿ ನಿಮ್ಮ ಕಿವಿಯ ಪರದೆಗಳನ್ನು ಬಡಿದು ಹಿಂದೆ ಮರಳುತ್ತಿದೆ. ಆದರೆ ನಿಮ್ಮ ಹೃದಯ ಯಾವುದೇ ಪ್ರಭಾವವನ್ನು ಸ್ವೀಕರಿಸುತ್ತಿಲ್ಲ. ನಿಮ್ಮ ಹೃದಯಕ್ಕೆ ಬೀಗ ಜಡಿಯಲ್ಪಟ್ಟಿದೆ. ನನ್ನ ನೈಜ ಅಭಿಸಂಬೋಧಿತರು ನಿಮ್ಮ ಕಿವಿಗಳಲ್ಲ, ಹೃದಯಗಳಾಗಿವೆ.

## ನಿರ್ಲಕ್ಷ್ಯದ ಬೀಗ ಮತ್ತು ಸತ್ಯದ (ವಾಸ್ತವಿಕ) ಕರೆ

1906ರಲ್ಲಿ ನನ್ನ ದಿವಂಗತ ತಂದೆಯ ಉಪಸ್ಥಿತಿಯಲ್ಲಿ ಪ್ರಪ್ರಥಮ ಬಾರಿ ಈ ಮಿಂಬರ್‌ನಿಂದ ನೀಡಿದ ಕರೆಯು ವಸ್ತುತಃ ಕಾಲದ ಕರೆಯಾಗಿತ್ತು. ಇಂದು 1936ರ ಮಾರ್ಚ್‌ನಲ್ಲಿ ಸುಮಾರು 30 ವರ್ಷಗಳಿಂದ (ಕಾಲದ ಕೆಲವು ಪ್ರಮುಖ ಮತ್ತು ದೇಶದ ಸೂಕ್ಷ್ಮ ಪರಿಸ್ಥಿತಿಯ ಕಾರಣ ಬಲವಂತವಾಗಿ ನನ್ನನ್ನು ಕಲ್ಕತ್ತಾದಿಂದ ದೂರವಿರಿಸಿದ ಕೆಲವು ವರ್ಷಗಳ ಹೊರತು) ನೀಡುತ್ತಿರುವ ಹಾಗೂ ತಮ್ಮ ಗಮನ ಸೆಳೆಯುತ್ತಿದ್ದ ಆ ಕರೆಯನ್ನೇ ಪುನರಾವರ್ತಿಸುತ್ತಿದ್ದೇನೆ. ಆದರೆ ಈವರೆಗೂ ನೀವು ನನ್ನ ಮಾತನ್ನು ಸ್ವೀಕರಿಸಿಲ್ಲ. ಆದ್ದರಿಂದ ಇಂದು ನಾನು ನಿಮ್ಮ ಹೃದಯದ ಹೆಸರನ್ನು ಎತ್ತುವುದಿಲ್ಲ, ನಿಮ್ಮ ಕಿವಿಗಳ ತನಕ ನನ್ನ ಧ್ವನಿಯನ್ನು ತಲುಪಿಸ ಬಯಸುತ್ತೇನೆ: ಏಕೆಂದರೆ ನೀವು ನಿಮ್ಮ ಮನಸ್ಸುಗಳ ಮೇಲೆ ನಿರ್ಲಕ್ಷ್ಯದ ಬೀಗಗಳನ್ನು ಜಡಿದಿರುವುದರಿಂದ ಇಂದು ಈದ್‌ನ ಈ ಭವ್ಯ ಉಡುಗೆಗಳಲ್ಲಿ ಅಡಗಿಸಿರುವ ನಿಮ್ಮ ಹೃದಯಗಳನ್ನು ನಾನು ಅಭಿಸಂಬೋಧಿಸಲು ಸಾಧ್ಯವಿಲ್ಲ.

ನೀವು ನನ್ನ ಮಾತನ್ನು ಸದಾ ಕಡೆಗಣಿಸಿದ್ದೀರೆಂದು ನನಗೆ ತಿಳಿದಿದೆ. ನಿಮಗೆ ಅದನ್ನು ನಿರಾಕರಿಸಲು ಸಾಧ್ಯವಿಲ್ಲ. ಏಕೆಂದರೆ ನನ್ನ ಮಾತಿನ ನಿರಾಕರಣೆ ಸತ್ಯದ ನಿರಾಕರಣೆಯಾಗಿದೆ. ನನ್ನ ಮಾತಿನ ನಿರಾಕರಣೆಯಿಂದ ನಿಮಗೆ ಯಾವುದೇ ಲಾಭವಾಗಿಲ್ಲ. ಸತ್ಯದಿಂದ ವಿಮುಖರಾಗಿ ಯಾರೂ ಪ್ರಯೋಜನ ಪಡೆದಿಲ್ಲ. ನಾನು ಹೇಳುತ್ತಿರುವುದು ಸತ್ಯವಾಗಿದೆ. ನೀವು ನನ್ನ ಮಾತನ್ನು ನಿರಾಕರಿಸಿ ನಿಮ್ಮ ಸಾಮೂಹಿಕ ಗೌರವಕ್ಕೇ ಚ್ಯುತಿ ತಂದಿದ್ದೀರಿ. ಸತ್ಯದಿಂದ ವಿಮುಖರಾಗಿ ಯಾರೂ ಯಾವುದೇ ರೀತಿಯ ಗೌರವವನ್ನು ಗಳಿಸಲು ಸಾಧ್ಯವಿಲ್ಲ. ಸತ್ಯ ನನ್ನೊಂದಿಗಿದೆ ಎಂದು ನಿಮಗೆ ತಿಳಿದಿರಲಿ. ಸತ್ಯವೇ ನನ್ನ ಧ್ವನಿ, ಅದನ್ನು ಎಂದಿಗೂ ನಿರಾಕರಿಸಲಾಗದು.

## 30 ವರ್ಷಗಳ ಚಿಂತನೆಯ ಪರಿಣಾಮ

ಒಂದು ದೀರ್ಘ ಸಮಯದಿಂದ ನಾನು ನಿಮ್ಮ ಮುಂದಿಡುತ್ತಾ ಬಂದಿರುವ ಸತ್ಯವನ್ನು ಇಂದು ಪುನಃ ನಿಮ್ಮ ಕಿವಿಗಳಿಗೆ ತಲುಪಿಸುತ್ತಿದ್ದೇನೆ. ಇಷ್ಟೊಂದು ದೊಡ್ಡ ಜನ ಸಮೂಹದಲ್ಲಿ ಈ ಸತ್ಯವನ್ನು ಸ್ವೀಕರಿಸಲು ಅರ್ಹ ಮನಸ್ಸುಳ್ಳ ಕೆಲವು ಮಂದಿಯೂ ಇಲ್ಲವೇ? ನಾನು ಪೂರ್ಣ ಗಮನ ಮತ್ತು ಕಳಕಳಿಯೊಂದಿಗೆ ನಿರಂತರ 30 ವರ್ಷಗಳ ಕಾಲ ದಿನನಿತ್ಯದ ಚಿಂತನೆ ಮತ್ತು ಸಮಾಲೋಚನೆಯ ನಂತರ ಒಂದು ತೀರ್ಮಾನಕ್ಕೆ ಬಂದಿದ್ದೇನೆ. ಅದೇನೆಂದರೆ, ಮುಸ್ಲಿಮರ ಸಾಮೂಹಿಕ ಏಳಿಗೆ ಮತ್ತು ಸುಧಾರಣೆಯು 'ನಮಾಝಿನ ಸಂಸ್ಥಾಪನೆ ಮತ್ತು ಝಕಾತ್ ಪಾವತಿ'ಯ ಹೊರತಾಗಿ ಬೇರೆ ಯಾವುದರಿಂದಲೂ ಸಾಧ್ಯವಿಲ್ಲ. ಇದನ್ನೇ ಕುರ್‌ಆನಿನ ಅನೇಕ ಪುಟದಲ್ಲಿ ಕಾಣಬಹುದು. ಈ ಎರಡೂ ವಿಷಯಗಳನ್ನು ನೀವು ಎಲ್ಲಕ್ಕಿಂತ ಹೆಚ್ಚು ನಿರ್ಲಕ್ಷಿಸುತ್ತಿದ್ದೀರಿ. ಪವಿತ್ರ ಕುರ್‌ಆನ್ ಈ ವಿಷಯಗಳಿಗೆ ಹೆಚ್ಚು ಒತ್ತು ಕೊಡುತ್ತದೆ, ಎಲ್ಲಕ್ಕಿಂತ ಮಿಗಿಲಾಗಿ ಇದನ್ನೇ ಆಜ್ಞಾಪಿಸಿದೆ. ಆದರೆ ನೀವು ಇವೆರಡನ್ನೂ ಎಲ್ಲಕ್ಕಿಂತ ಹೆಚ್ಚು ನಿರ್ಲಕ್ಷಿಸಿದ್ದೀರಿ. ಈ ನಿರ್ಲಕ್ಷ್ಯವು ನಿರಾಕರಣೆಯಲ್ಲದಿದ್ದರೂ ಅದಕ್ಕೆ ಸಮಾನವಾಗ ಬಹುದಷ್ಟರ ಮಟ್ಟಿಗೆ ಅಶ್ರದ್ಧೆ ತೋರಿಸುತ್ತಿದ್ದೀರಿ.

ಇಸ್ಲಾಮ್ ಮತ್ತು ಸತ್ಯನಿಷೇಧದ ನಡುವಿನ ವ್ಯತ್ಯಾಸದ ಮಾನದಂಡವು ನಮಾಝ್ ಮತ್ತು ಝಕಾತ್ ಎಂದು ಕುರ್‌ಆನ್ ಸಾರಿದೆ. "ಆದರೂ ಇವರು ಪಶ್ಚಾತ್ತಾಪ ಪಟ್ಟರೆ ಮತ್ತು ನಮಾಝನ್ನು ಸಂಸ್ಥಾಪಿಸಿ ಝಕಾತ್ ಕೊಟ್ಟರೆ, ನಿಮ್ಮ ಧರ್ಮಬಾಂಧವರಾಗಿರುತ್ತಾರೆ. ತಿಳುವಳಿಕೆಯುಳ್ಳವರಿಗೆ ನಾವು ನಮ್ಮ ಆದೇಶಗಳನ್ನು ವಿವರಿಸುತ್ತೇವೆ." (ಪವಿತ್ರ ಕುರ್‌ಆನ್: 9: 11)

## ಅವಲಂಬನೆ ಮತ್ತು ಇಸ್ಲಾಮೀ ಪರಿಧಿ

ಇಸ್ಲಾಮೀ ಅವಲಂಬನೆ ಮತ್ತು ಇಸ್ಲಾಮೀ ಪರಿಧಿಯೊಳಗೆ ಬರಲು ಸತ್ಕರ್ಮ

ಗಳೊಂದಿಗೆ ನಮಾಝ್‌ನ ಸಂಸ್ಥಾಪನೆ ಮತ್ತು ಝಕಾತ್‌ನ ಪಾವತಿ ಶರ್ತವಾಗಿದೆ. ಈ ಇಸ್ಲಾಮೀ ಕರ್ಮಗಳು ಸಾಮೂಹಿಕತೆಯನ್ನು ಬಯಸುತ್ತವೆ. ಇಸ್ಲಾಮ್ ತನ್ನ ಪರಿಧಿಯೊಳಗಿರುವವರ ಹಿತಾಸಕ್ತಿಗಾಗಿ ಮುಸ್ಲಿಮರ ಪ್ರತಿಯೊಂದು ಕರ್ಮವು ಸಾಮೂಹಿಕವಾಗಿರಬೇಕೆಂದು ಬಯಸುತ್ತದೆ. ಆದ್ದರಿಂದ ಕೆಲವೊಂದು ಅನಿವಾರ್ಯತೆಗಳನ್ನು ಹೊರತುಪಡಿಸಿ ಪ್ರತಿಯೋರ್ವ ಮುಸ್ಲಿಮನು ನಮಾಝನ್ನು ಸದಾ ಸಾಮೂಹಿಕವಾಗಿ ನಿರ್ವಹಿಸುವುದನ್ನು ಕಡ್ಡಾಯಗೊಳಿಸಲಾಗಿದೆ. ಜೀವನೋಪಾಯದ ನಿಬಿಡತೆಯು ಅಡ್ಡಿಯಾಗುವುದಾದರೆ ಕನಿಷ್ಟ ಒಂದು ಸಮಯದ ನಮಾಝನ್ನಾದರೂ ಸಾಮೂಹಿಕವಾಗಿ ನಿರ್ವಹಿಸುವುದು ಕಡ್ಡಾಯ. ಇದೇ ರೀತಿಯ ಆದೇಶ ಝಕಾತ್ ಬಗ್ಗೆಯೂ ಇದೆ. ಮುಸ್ಲಿಮರ ಝಕಾತ್ ಕೂಡಾ ಸಾಮೂಹಿಕ ರೂಪದಲ್ಲಿ ಪಾವತಿಸಲ್ಪಡಬೇಕು; ಇದು ಇಡೀ ನಗರಕ್ಕೆ ಒಂದೇ ವ್ಯವಸ್ಥೆಯಾಗಬೇಕೆಂದಿಲ್ಲ.

## ಒಂದು ತಪ್ಪು ಕಲ್ಪನೆಯ ನಿವಾರಣೆ

ಕೆಲವೊಂದು ವರ್ತುಲಗಳಲ್ಲಿ ಇದಕ್ಕೆ 'ನಾಯಕತ್ವ' ಶರ್ತವಾಗಿದೆಯೆಂಬ ತಪ್ಪು ಕಲ್ಪನೆಯಿದೆ. ಅದನ್ನು ನಾನು ನಿವಾರಿಸ ಬಯಸುತ್ತೇನೆ. ಆ ರೀತಿಯ ಯಾವುದೇ ಶರ್ತವಿಲ್ಲ, ಅದೊಂದು ಅತ್ಯುತ್ತಮ ರೂಪವಾಗಿದೆಯಷ್ಟೇ. ಆದರೆ ಪರಿಸ್ಥಿತಿಯ ಬೇಡಿಕೆ ಅಥವಾ ವಾತಾವರಣದ ಪರಿಣಾಮವಾಗಿ ನಾಯಕತ್ವ ಸಾಧ್ಯವಿಲ್ಲವೆಂದಾದರೆ, ಅದನ್ನು ಹಲಾಲ್ ಅಥವಾ ಹರಾಮ್‌ನ ನೆಪವಾಗಿಸಿ ಅಲ್ಲಾಹನ ಸ್ಪಷ್ಟ ಆಜ್ಞೆಯನ್ನು ಜಾರಿಗೊಳಿಸುವುದರಿಂದ ನುಣುಚಿಕೊಳ್ಳುವ ಪ್ರಯತ್ನವು ಅಲ್ಲಾಹನ ಬಳಿ ಶಿಕ್ಷಾರ್ಹ ಸಂಗತಿಯಾಗಿದೆ. ಪ್ರತಿಯೊಬ್ಬನೂ ವೈಯಕ್ತಿಕವಾಗಿ ಝಕಾತ್ ಪಾವತಿಸುವುದು ಸರಿಯಲ್ಲವೆಂದು ನಾನು ಈ ಮೊದಲೇ ತಿಳಿಸಿದ್ದೇನೆ. ವಾಸ್ತವದಲ್ಲಿ, ನೀವು ವೈಯಕ್ತಿಕವಾಗಿ ಪಾವತಿಸಿದರೆ ಅದು ಝಕಾತೇ ಅಲ್ಲ, ಅದಕ್ಕೆ ಬೇರೇನಾದರೂ ಹೆಸರು ಕೊಡಬಹುದು, ಆದರೆ ಝಕಾತ್ ಎನ್ನಲಾಗದು.

## ಕಸಿಯಲ್ಪಟ್ಟ ಸಮೃದ್ಧಿಯ ಮರಳುವಿಕೆ

ನೀವು ಮುಸ್ಲಿಮರೆಂಬ ನೆಲೆಯಲ್ಲಿ ಕುರ್‌ಆನಿನ ಆದೇಶ ಮತ್ತು ಅದರ ಸ್ವಾಭಾವಿಕ ಇಂಗಿತದಂತೆ ನಿಮ್ಮ ಸಾಮೂಹಿಕ ಕರ್ಮಗಳಾದ ನಮಾಝ್ ಮತ್ತು ಝಕಾತ್‌ಗಳನ್ನು ನಿರ್ವಹಿಸುವ ತನಕ ನೀವು ಅರಸುತ್ತಿರುವ ಎಲ್ಲಾ ಧಾರ್ಮಿಕ ಸಮೃದ್ಧಿ, ಅನುಗ್ರಹ ಮತ್ತು ವಾಗ್ದಾನಗಳು ನಿಮ್ಮಿಂದ ಸದಾ ದೂರವಾಗಿರುವುವು. ನೀವು ನಿಮ್ಮ ಕರ್ಮಗಳಲ್ಲಿ ಅದರ ಸಾಮೂಹಿಕ ರೂಪ ಮತ್ತು ಸಂಘಟಿತ ಸುವ್ಯವಸ್ಥೆಯನ್ನು ಸ್ಥಾಪಿಸಿದ ದಿನದಿಂದ ನಿಮ್ಮಿಂದ ಕಸಿಯಲ್ಪಟ್ಟ ಆ ಎಲ್ಲಾ ಅನುಗ್ರಹಗಳು ನಿಮಗೆ ಮರಳಿಸಲ್ಪಡುವುದೆಂಬುದರಲ್ಲಿ ಸಂಶಯವಿಲ್ಲ.

## ಝುಕಾತ್‌ನ ವಸೂಲಿ ಮತ್ತು ವಿರತಣಾ ವ್ಯವಸ್ಥೆ

ನೀವು ಮಾಡುತ್ತಿರುವ ಕರ್ಮಗಳಲ್ಲಿ ಸಾಮೂಹಿಕತೆಯನ್ನು ಉಂಟು ಮಾಡಿರಿ. ಪ್ರತಿಯೊಂದು ಗ್ರಾಮ, ಮೊಹಲ್ಲಾಗಳಲ್ಲಿ ಕನಿಷ್ಟ 5 ಜನರ ಒಂದು ಜಮಾಅತ್ (ತಂಡ) ಮಾಡಿಕೊಂಡು ಝುಕಾತ್ ವಸೂಲಿಯ ವ್ಯವಸ್ಥೆಯನ್ನು ಸಂಘಟಿಸಿರಿ ಮತ್ತು ಪೂರ್ಣ ಹೊಣೆಗಾರಿಕೆಯೊಂದಿಗೆ ನಿಯಮ ಪ್ರಕಾರ ಅದನ್ನು ಅರ್ಹ ಜನರಲ್ಲಿ ವ್ಯಯಿಸಿರಿ. ಶೀಘ್ರವೇ ಇದರ ಪರಿಣಾಮದಿಂದ ಮೊಹಲ್ಲಾ ಮತ್ತು ನಗರದ ಜನರು ನಿಮ್ಮ ಸಮಿತಿಯ ಸದಸ್ಯರಾಗುವುದರೊಂದಿಗೆ ಇದೊಂದು ಅನುಕರಣಾರ್ಹ ಕಾರ್ಯಕ್ಕೆ ಮಾದರಿಯಾಗಬಹುದು. ಇದನ್ನು ಜಾರಿಗೊಳಿಸುವುದರಿಂದ ಅನುಗ್ರಹ, ಸಮೃದ್ಧಿಗಳ ಅನ್ವೇಷಕರು ತಮ್ಮ ಕಳೆದು ಹೋದ ಸಂಪನ್ಮೂಲಗಳನ್ನು ಕಂಡುಕೊಳ್ಳಬಹುದು. ನನ್ನ ಮಾತನ್ನು ಹೃತ್ಪೂರ್ವಕ ಸ್ವೀಕರಿಸುವ 5 ಜನ ಹೃದಯವಂತರು ನಿಮ್ಮ ಮಧ್ಯೆ ಇರಲಾರರೇ?

ಅದೇ ವೇಳೆ, ನೀವು ನಿರ್ಲಕ್ಷ್ಯದಿಂದ ಕಳೆದುಕೊಂಡ ಘನತೆ ಮತ್ತು ಸಂಪತ್ತನ್ನು ಕೇವಲ ವೈಚಾರಿಕ ಸಂಪನ್ಮೂಲಗಳಿಂದ ಮರಳಿ ಗಳಿಸಲಾರಿರೆಂದು ನೆನಪಿರಲಿ. ಅಂದರೆ ಸತ್ಕರ್ಮ ಮತ್ತು ಸಂಘಟಿತ ಕಾರ್ಯಗಳು ದೃಢವಾಗಿ ಸ್ಥಾಪಿಸಲ್ಪಡುವ ವರೆಗೆ ಅವುಗಳು ಮರಳಲಾರವು. ವೈಚಾರಿಕ ಸಂಪನ್ಮೂಲಗಳು ಕೇವಲ ಮಸ್ತಿಷ್ಕದ ಆಂತರಿಕ ಬಣ್ಣವೆಂದು ತಿಳಿಯಿರಿ. ಅದು ಬಾಹ್ಯದ ಬಣ್ಣವಲ್ಲ. ಕರ್ಮಗಳ ಬಣ್ಣ ವ್ಯಕ್ತವಾದಾಗಲೇ ಬಾಹ್ಯದಲ್ಲಿ ಬಣ್ಣ ತುಂಬುತ್ತವೆ. ಕರ್ಮಗಳಲ್ಲಿ ಬಣ್ಣ ವ್ಯಕ್ತವಾಗಬೇಕಾದರೆ ಬೇರು ಮತ್ತು ಬುನಾದಿಗಳನ್ನು ಸುದೃಢವಾಗಿಡಬೇಕು.

## ಉನ್ನತಿಗೆ ಏರುವುದು

ಒಂದು ಮರದ ರೆಂಬೆ ಮತ್ತು ಎಲೆಗಳ ಮೇಲೆ ನೀರು ಹಾಯಿಸುವುದರಿಂದ ಮರವು ಹಸಿರಾಗಿರುವುದಿಲ್ಲ, ಬದಲಾಗಿ ಅದರ ಬೇರುಗಳಿಗೆ ನೀರು ಪೂರೈಸಿದರೆ ಮಾತ್ರ ಮರವು ಪೂರ್ಣ ಹಸಿರಾಗಿ ಪ್ರಯೋಜನಕಾರಿಯಾಗಬಹುದು. ಆದ್ದರಿಂದ ನೀವು ನಿಮ್ಮ ಕಳೆದು ಹೋದ ಸಂಪತ್ತು ಮತ್ತು ಘನತೆಗಳನ್ನು ಮರಳಿ ಪಡೆಯಲು ಪ್ರಸಕ್ತ ಅವನತಿಯಿಂದ ಉತ್ತುಂಗತೆಗೆ ಪುನಃ ತಲುಪಲು ಬಯಸುವುದಾದರೆ, ಬೇರಿನ ಮೂಲ ಬುನಾದಿಗಳನ್ನು ಪುನರುಜ್ಜೀವನಗೊಳಿಸುವ ಬಗ್ಗೆ ಚಿಂತಿಸಬೇಕು ಅಥವಾ ನಿಮ್ಮ ನಮಾಝುನ್ನು ಅಲಂಕರಿಸಿ, ಸಾಮೂಹಿಕ ರೂಪದಲ್ಲಿ ಝುಕಾತ್‌ನ ಸಂಗ್ರಹ ಮತ್ತು ವಿತರಣೆಯ ವ್ಯವಸ್ಥೆಯನ್ನು ಸ್ಥಾಪಿಸಬೇಕು.

✍ ಅಬುಲ್ ಕಲಾಮ್

# ಕಡ್ಡಾಯ ಝಕಾತ್ ಮತ್ತು ಅದರ ಅಗತ್ಯ

## ಘೋರ ವಿಪತ್ತಿನ ಪ್ರಮುಖ ಕಾರಣ

ಝಕಾತ್ ಮುಸ್ಲಿಮರ ಒಂದು ಶ್ರೇಷ್ಠ ಕರ್ತವ್ಯ ಮತ್ತು ಶರೀಅತ್‌ನ ಪ್ರಮುಖ ಆದೇಶಗಳಲ್ಲೊಂದಾಗಿದೆ. ಇದು ನಮಾಝ್, ಉಪವಾಸ, ಹಜ್ಜ್‌ಗಳಂತೆಯೇ ಕಡ್ಡಾಯ ಕರ್ಮವಾಗಿದೆ. ಒಟ್ಟಿನಲ್ಲಿ ನಮ್ಮ ಪ್ರಸಕ್ತ ಸನ್ನಿವೇಶದ ಘೋರ ವಿಪತ್ತಿಗೆ ನಮ್ಮ ಕರ್ತವ್ಯ ಲೋಪ ಮತ್ತು ಝಕಾತ್‌ನ ಸಂಗ್ರಹ ಹಾಗೂ ಅದರ ವಿತರಣೆಯ ವ್ಯವಸ್ಥೆಯಲ್ಲಿ ಸಂಪನ್ಮೂಲಗಳ ಕೊರತೆಯನ್ನು ಎದುರಿಸುವುದೇ ಪ್ರಮುಖ ಕಾರಣವಾಗಿದೆ. ನಮ್ಮ ಮನೆಯ ಕಡೆಗೆ ದೃಷ್ಟಿ ಹಾಯಿಸುವುದರ ಬದಲು ನಾವು ಲೋಕದ ಇತರೆಡೆಗೆ ದೃಷ್ಟಿಯನ್ನು ಓಡಿಸುತ್ತಿದ್ದೇವೆ.

## ಯೂರೋಪ್ ಮತ್ತು ಅದರ ಸಂಕಷ್ಟ

ಇಂದು[1] ಯುರೋಪ್‌ನಲ್ಲಿ ವಿವಿಧ ವರ್ಗಗಳ ಮಧ್ಯೆ ಉಂಟಾಗಿರುವ ಸಂಘರ್ಷ; ಬಡ ಮತ್ತು ಕಾರ್ಮಿಕ ವರ್ಗದ ಬಡತನ ಮತ್ತು ಸಂಕಷ್ಟಗಳು; ಹಾಗೆಯೇ ಸಂಪತ್ತಿನ ಧ್ರುವೀಕರಣ[2] ಇತ್ಯಾದಿ ಕಾರಣಗಳಿಂದಾಗಿ ಅಲ್ಲಿಯ ಜನರ ಸಾಮೂಹಿಕ, ಆರ್ಥಿಕ ಪರಿಸ್ಥಿತಿಯ ಬುನಾದಿಯೇ ಅಲುಗಾಡುತ್ತಿದೆ. ಈ ಕಾರಣದಿಂದಲೇ ಸಮಾಜವಾದ (ಸೋಶಿಯಲಿಸಂ) ಜನ್ಮ ತಾಳಿತು.

ಇತ್ತೀಚೆಗೆ ಇಂಗ್ಲಂಡ್‌ನಲ್ಲಿ ಲಾಯ್ಡ್ ಜಾರ್ಜ್ ಸಿರಿವಂತರ ತೆರಿಗೆಯ ಸಮಸ್ಯೆಯನ್ನೆತ್ತಿದ್ದರು. ಬ್ರಿಟನ್ನಿನ ಕಾರ್ಮಿಕರ ಪರಿಸ್ಥಿತಿಯ ಸುಧಾರಣೆ ಮತ್ತು ಅವರ ಆರ್ಥಿಕ ಸಬಲೀಕರಣದ ಉದ್ದೇಶವು ಒಂದು ದೊಡ್ಡ ಗೊಂದಲವನ್ನು ಸೃಷ್ಟಿಸಿತ್ತು.

ಇವೆಲ್ಲವೂ ಒಂದು ಜನಾಂಗದಲ್ಲಿರುವ ಬಡ ವರ್ಗದ ಅಗತ್ಯಗಳು

1. ಈ ಲೇಖನ ಪ್ರಥಮ ಬಾರಿ 1913 ಮೇ 9ರಂದು ಪ್ರಕಟವಾಗಿತ್ತು.
2. ಈ ರೀತಿ ಸಂಪತ್ತಿನ 'ಧ್ರುವೀಕರಣ'ವು ಕೇವಲ ಒಂದು ಜನಸಮೂಹ ಅಥವಾ ಸಮಾಜದ ಒಂದು ವರ್ಗದ ಕೈಯಲ್ಲಿ ಶೇಖರಣೆಯಾಗುವುದು ಹಾಗೂ ಇತರ ವರ್ಗಗಳು ಸಂಪೂರ್ಣ ವಂಚಿತರಾಗುವ ಪರಿಸ್ಥಿತಿಯು ನಾಗರಿಕತೆ ಮತ್ತು ಸಮಾಜಕ್ಕೆ ವಿನಾಶಕಾರಿಯಾಗಿದೆ. ಬೃಹತ್ ರೋಮ್ ಸಾಮ್ರಾಜ್ಯದ ಅವನತಿಯ ಒಂದು ಕಾರಣ ಇದೇ ಆಗಿತ್ತು. ವಾರೀಸು ಸೊತ್ತಿನ ವಿತರಣೆಯ ಇಸ್ಲಾಮೀ ಕಾನೂನು ಈ ಯುಕ್ತಿಯನ್ನೇ ಹೊಂದಿದೆ.

ಪೂರ್ಣವಾಗದಿರುವ ಸಂಕೇತಗಳಾಗಿವೆ. ಜರ್ಮನಿ ಮತ್ತು ಅಮೇರಿಕದ ಕೆಲವು ಭಾಗಗಳಲ್ಲಿ ಬಡವರು ಮತ್ತು ಅಪೇಕ್ಷಿತರಿಗಾಗಿ ಅಲ್ಲಿ ಸರಕಾರ ಮತ್ತು ಜನತೆಯ ಜಂಟಿ ಸಹಯೋಗದಲ್ಲಿ ಒಂದು 'ಫಂಡ್' ಸ್ಥಾಪಿಸಲಾಗಿದೆ. ಇಂದು ನಮ್ಮ ನಡುವೆ ವ್ಯಾಪಕವಾಗುತ್ತಿರುವ ಸಹಕಾರಿ ಸಂಘ-ಸಂಸ್ಥೆಗಳು ಮತ್ತು ಕೃಷಿ, ಗ್ರಾಮೀಣ ಬ್ಯಾಂಕ್‌ಗಳು ಕೂಡಾ ರಾಷ್ಟ್ರದ ಅಪೇಕ್ಷಿತ ಮತ್ತು ಅಸಹಾಯಕ ಜನರ ಸಮಸ್ಯೆಗಳ ಪರಿಹಾರಕ್ಕಾಗಿ ಸ್ಥಾಪಿಸಲ್ಪಟ್ಟಿವೆ.

## ಇಸ್ಲಾಮ್: ಸಾಮೂಹಿಕ ಕ್ಷೋಭೆಗಳ ಪರಿಹಾರ

ಆದರೆ ಇಸ್ಲಾಮ್ ತನ್ನ ಆರಂಭದಿಂದಲೇ ಈ ಸಾಮೂಹಿಕ ಮತ್ತು ನಾಗರಿಕ ಕ್ಷೋಭೆಗಳಿಗೆ ಪರಿಹಾರ ಒದಗಿಸಿತ್ತು. ಕಡ್ಡಾಯ ಝಕಾತ್‌ನ ದೊಡ್ಡ ಯುಕ್ತಿ ಏನೆಂದರೆ ಸಮಾಜದ ಬಡ ನಿರ್ಗತಿಕರನ್ನು ಗುರುತಿಸಿ, ಅವರ ಅಗತ್ಯ ಗಳ ಪೂರೈಕೆಯ ವ್ಯವಸ್ಥೆ ಮಾಡುವುದೇ ಆಗಿದೆ. ಅದೇ ರೀತಿ ಸಮುದಾಯದ ಆರ್ಥಿಕ ಅಗತ್ಯಗಳಿಗಾಗಿ ಒಂದು ಶಾಶ್ವತ ಫಂಡ್‌ನ ವ್ಯವಸ್ಥೆಯೂ ಆಗುವುದು.

## ಬಡ್ಡಿ ನಿಷೇಧದ ಕಾರಣ

ಬಡವರು ಮತ್ತು ಅಪೇಕ್ಷಿತರ ಜೀವನಕ್ಕೆ ಮಾರಕವಾದ ಹಾಗೂ ಶ್ರೀಮಂತರು ಅವರ ಮೇಲೆ ದೌರ್ಜನ್ಯ ಮತ್ತು ದಬ್ಬಾಳಿಕೆಗೆ ಅವಕಾಶ ಒದಗಿಸುವ ಬಡ್ಡಿಯನ್ನು ಇಸ್ಲಾಮ್ ನಿಷೇಧಿಸಿದೆ. ಇನ್ನೊಂದೆಡೆ ಅವರು ತಮ್ಮ ಅಗತ್ಯಗಳಿಗಾಗಿ ಬಡ್ಡಿ ನೀಡಲು ವಿವಶರಾಗುವ ಅವಕಾಶವೇ ಬಾರದಂತೆ ಝಕಾತನ್ನು ಕಡ್ಡಾಯಗೊಳಿಸಿದೆ.

## ಕಡ್ಡಾಯ ಝಕಾತಿನ ಸಂಗ್ರಹ ಮತ್ತು ವಿತರಣಾ ವ್ಯವಸ್ಥೆ

ಕಡ್ಡಾಯ ಝಕಾತನ್ನು ಜಾರಿಗೊಳಿಸುವುದು ಹಾಗೂ ಅದರ ಸಂಗ್ರಹ ಮತ್ತು ವಿತರಣೆಗೆ ಸಂಬಂಧಿಸಿ ಒಂದು ಕ್ರಮಬದ್ಧವಾದ ವ್ಯವಸ್ಥೆಯನ್ನು ರೂಪಿಸು ವುದು ಪ್ರಸಕ್ತ ಕಾಲದ ಅಗತ್ಯ ಮಾತ್ರವಲ್ಲ ಅನಿವಾರ್ಯ ಬೇಡಿಕೆಯಾಗಿದೆ.

## ಸಂಕಷ್ಟಗಳ ನೈಜ ಕಾರಣ

ಒಳಿತಿನ ಸ್ಥಾಪನೆ ಮತ್ತು ಕೆಡುಕಿನ ನಿರ್ಮೂಲನೆಯು ಕಾರ್ಯತಃ ರದ್ದಾಗಿರುವುದೇ ಈ ಸಂಕಷ್ಟಗಳಿಗೆ ಕಾರಣ. ನಮ್ಮ ವಿದ್ವಾಂಸರು ತಮ್ಮ ಸಹಜ ಕರ್ತವ್ಯಗಳನ್ನು ಮರೆತು ಬಿಟ್ಟಿದ್ದಾರೆ, ಚಿಕಿತ್ಸೆ ನೀಡಬೇಕಾದವರೇ ರೋಗಿಗಳು ಮತ್ತು ಚಿಕಿತ್ಸೆಯ ಅಗತ್ಯವುಳ್ಳವರಾಗಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ನಾವು ಯಾವೆಲ್ಲಾ ವಿಷಯಗಳಿಗಾಗಿ ರೋಧಿಸಬಹುದು? ಯಾವೆಲ್ಲಾ ವಿಷಯಗಳಿಗೆ ಮರುಗಬಹುದು?



# ಝಕಾತ್ ಮತ್ತು ಪವಿತ್ರ ಕುರ್‌ಆನ್

## ಝಕಾತ್‌ಗೆ ಅರ್ಹರು

ಪವಿತ್ರ ಕುರ್‌ಆನಿನಲ್ಲಿ ಈ ರೀತಿ ಆದೇಶಿಸಲಾಗಿದೆ,

إِنَّمَا الصَّدَقَٰتُ لِلْفُقَرَآءِ وَالْمَسَٰكِينِ وَالْعَٰمِلِينَ عَلَيْهَا وَالْمُؤَلَّفَةِ قُلُوبُهُمْ وَفِى الرِّقَابِ وَالْغَٰرِمِينَ وَفِى سَبِيلِ اللَّهِ وَابْنِ السَّبِيلِ فَرِيضَةً مِّنَ اللَّهِ وَاللَّهُ عَلِيمٌ حَكِيمٌ ۝٦٠

"ವಾಸ್ತವದಲ್ಲಿ ಈ ಕಡ್ಡಾಯ ದಾನಗಳು ಫಕೀರ(ಬಡವ)ರಿಗೆ, 2. ಮಿಸ್ಕೀನ್ (ದರಿದ್ರ)ರಿಗೆ, 'ನಿರ್ಬಂಧ ದಾನ'ಗಳ ಕಾರ್ಯಗಳಲ್ಲಿ ನೇಮಕಗೊಂಡವರಿಗೆ, ಮನವೊಲಿಸಬೇಕಾದ ಅಗತ್ಯವಿರುವವರಿಗೆ, ಕೊರಳು ಬಿಡಿಸುವುದಕ್ಕೆ (ದಾಸ್ಯದ ಸಂಕೋಲೆಯಲ್ಲಿ ಬಂಧಿಯಾಗಿರುವವರನ್ನು ಮುಕ್ತಿ ಗೊಳಿಸಲು), (ಸಾಲದ ಹೊರೆಯಲ್ಲಿ ಸಿಲುಕಿ ಅದನ್ನು ತೀರಿಸುವ ಸಾಮರ್ಥ್ಯವಿಲ್ಲದ) ಸಾಲಗಾರರಿಗೆ ನೆರವು ನೀಡಲಿಕ್ಕೆ, ಅಲ್ಲಾಹನ ಮಾರ್ಗದಲ್ಲಿ (ಜಿಹಾದ್ ಅಥವಾ ಅಂತಹ ಧರ್ಮದ ಉತ್ತುಂಗತೆಯ ಕಾರ್ಯ ಚಟುವಟಿಕೆ) ಮತ್ತು ಪ್ರಯಾಣಿಕರ ಸತ್ಕಾರಕ್ಕಾಗಿ ಖರ್ಚು ಮಾಡಲಿಕ್ಕಾಗಿರುತ್ತವೆ. (ಅಂದರೆ ತನ್ನ ಮನೆಯನ್ನು ತಲುಪಲು ಸಾಧ್ಯವಿಲ್ಲದ ಅಸಹಾಯಕ ಪರಿಸ್ಥಿತಿಯಲ್ಲಿ ಸಿಲುಕಿರುವವರಿಗೆ) ಅಲ್ಲಾಹನ ಕಡೆಯ ಒಂದು ಕಡ್ಡಾಯವಿದು. ಅಲ್ಲಾಹನು ಸರ್ವಜ್ಞನೂ ಮಹಾ ಧೀಮಂತನೂ ಆಗಿರುವನು." (ಪವಿತ್ರ ಕುರ್‌ಆನ್: 9: 60)

ಈ ಸೂಕ್ತವು ಝಕಾತ್‌ನ ಮೊತ್ತದಿಂದ ಖರ್ಚು ಮಾಡಬೇಕಾದ ವಿಭಾಗಗಳನ್ನು ಪರಿಚಯಿಸಿದ್ದು, ಇದಕ್ಕೆ ಸಂಬಂಧಿಸಿ ಕೆಲವೊಂದು ಕ್ಲಿಷ್ಟತೆಗಳ ಕುರಿತು ಸ್ಪಷ್ಟೀಕರಣದ ಅಗತ್ಯವಿದೆ.

## ಅವಲಂಬನೆ ಮತ್ತು ಅದರ ಮಿತಿಗಳು

ಬಡವರು (ಫಕೀರ್) ಮತ್ತು ದರಿದ್ರರು (ಮಿಸ್ಕೀನ್) ಎಂದರೆ ಅಪೇಕ್ಷೆಯುಳ್ಳವರು ಎಂದಾಗಿದೆ. ಆದರೆ ಬಡವ ಸಾಮಾನ್ಯನಾಗಿದ್ದರೆ, ದರಿದ್ರನ ಪರಿಸ್ಥಿತಿ

ಭಿನ್ನವಾಗಿದೆ. ಜೀವನಾಧಾರಕ್ಕೆ ಏನೂ ಇಲ್ಲದವರನ್ನು ಫಕೀರ ಎನ್ನಲಾಗುತ್ತದೆ. ಆದರೆ ಮಿಸ್ಕೀನ್ ಎಂದರೆ ಅಪೇಕ್ಷೆಯ ಕೊನೆಯ ಹಂತಕ್ಕೆ ಇನ್ನೂ ತಲುಪಿಲ್ಲ ದವನು; ಆದರೆ ಆತನ ಅಪೇಕ್ಷೆಯನ್ನು ಪರಿಹರಿಸದಿದ್ದರೆ ಬಹು ಬೇಗನೆ ಆ ಹಂತಕ್ಕೆ ತಲುಪಬಹುದು. ಉದಾ: ಸಮಾಜದಲ್ಲಿ ವಿವಿಧ ಕಾರಣಗಳಿಂದ ದಿವಾಳಿಯಾಗಿ, ಆರ್ಥಿಕ ಜೀವನೋಪಾಯದ ವ್ಯವಸ್ಥೆ ಮಾಡಲು ಸಾಧ್ಯವಿಲ್ಲ ದವರು. ಅವರ ಶರೀರದಲ್ಲಿ ಶುಭ್ರ ಬಟ್ಟೆ ಇನ್ನೂ ಬಾಕಿ ಇರಬಹುದು, ಮನೆ ಯಲ್ಲಿ ಅಲ್ಪಸ್ವಲ್ಪ ವಸ್ತುಗಳೂ ಲಭ್ಯವಿರಬಹುದು, ಜೇಬಿನಲ್ಲಿ ಕೆಲವು ನೋಟುಗಳೂ ಸಿಗಬಹುದು, ಅವರಿಗೆ ಇಂದು ಆಹಾರ ಸಿಗದಿದ್ದರೆ ಹಸಿದಿರಲಾರರು, ನಾಳೆ ಸಿಗದಿದ್ದರೆ ಮನೆಯ ಪಾತ್ರೆಗಳನ್ನು, ನಾಡಿದ್ದು ಸಿಗದಿದ್ದರೆ ಬಟ್ಟೆಬರೆಗಳನ್ನೂ ಮಾರಿಬಿಡಬಹುದು. ಆದರೆ ಕೊನೆಗೆ ಜೀವನೋಪಾಯದ ಬೇರಾವ ದಾರಿಯೂ ಅವರ ಮುಂದೆ ಉಳಿಯಲಾರದು.

ಫಕೀರ ಮತ್ತು ಮಿಸ್ಕೀನ್‌ಗಳ ನಡುವಿನ ಇನ್ನೊಂದು ವ್ಯತ್ಯಾಸವೇನೆಂದರೆ ಫಕೀರನು ಬೇಡಲು ಹಿಂಜರಿಯುವುದಿಲ್ಲವಾದರೆ, ಮಿಸ್ಕೀನ್‌ಗೆ ಅವನ ಸ್ವಾಭಿಮಾನ ಮತ್ತು ಆತ್ಮಗೌರವ ಬೇಡಲು ಅನುಮತಿಸುವುದಿಲ್ಲ. ಒಂದು ಹದೀಸ್‌ನಲ್ಲಿ ಪ್ರವಾದಿವರ್ಯರು(ಸ) ಮಿಸ್ಕೀನ್‌ನ ಕುರಿತು ಈ ರೀತಿ ಪರಿಚಯ ಪಡಿಸಿರುವರು, "ಆತನಲ್ಲಿ ಅಗತ್ಯಗಳನ್ನು ಪೂರೈಸಬಲ್ಲ ಸಂಪನ್ಮೂಲ ಲಭ್ಯವಿಲ್ಲದಿರುವುದು ಮತ್ತು ಅವನ ಬಡತನವು ಇತರರು ಸಹಾಯ ಮಾಡುವಂತೆ ಸ್ವತಃ ಆತನಲ್ಲಿ ವ್ಯಕ್ತವಾಗ ದಿರುವುದು, ಯಾರೊಂದಿಗೂ ಕೈ ಚಾಚಿ ಬೇಡಲು ಅನುವಾಗದಿರುವುದು." ಪವಿತ್ರ ಕುರ್‌ಆನ್‌ನ ಈ ಕೆಳಗಿನ ಸೂಕ್ತಗಳು ಅದನ್ನೇ ಸೂಚಿಸಿದೆ.

يَحْسَبُهُمُ الْجَاهِلُ أَغْنِيَاءَ مِنَ التَّعَفُّفِ تَعْرِفُهُم بِسِيمَاهُمْ لَا يَسْأَلُونَ النَّاسَ إِلْحَافًا

"ಅರಿವಿಲ್ಲದವನು ಅವರ ಸ್ವಾಭಿಮಾನವನ್ನು ಕಂಡು ಅವರು ಸ್ಥಿತಿವಂತ ರಾಗಿದ್ದಾರೆಂದೇ ಊಹಿಸುತ್ತಾನೆ. ನೀವು ಅವರ ಮುಖಭಾವಗಳಿಂದ ಅವರ ಆಂತರಿಕ ಸ್ಥಿತಿಯನ್ನು ತಿಳಿದುಕೊಳ್ಳಬಲ್ಲಿರಿ. ಆದರೆ, ಅವರು ಜನರ ಬೆಂಬತ್ತಿ ಬೇಡುವವರಲ್ಲ." (ಪವಿತ್ರ ಕುರ್‌ಆನ್: 2: 273)

## ಮಿಸ್ಕೀನ್(ದರಿದ್ರರು) ವರ್ತುಲದ ವಿಶಾಲತೆ

لِلْفُقَرَاءِ الَّذِينَ أُحْصِرُوا فِي سَبِيلِ اللَّهِ لَا يَسْتَطِيعُونَ ضَرْبًا فِي الْأَرْضِ

"ಅಲ್ಲಾಹನ ಮಾರ್ಗದಲ್ಲಿ ಕಾರ್ಯವೆಸಗುವ ಭರದಲ್ಲಿ ತಮ್ಮ ಸ್ವಂತ ಜೀವನೋಪಾಯಕ್ಕಾಗಿ ಭೂಮಿಯಲ್ಲಿ ಶ್ರಮ ಪಡಲು ಸಾಧ್ಯವಾಗದಿರುವ ಬಡಜನರು ಮುಖ್ಯವಾಗಿ ಸಹಾಯಕ್ಕೆ ಅರ್ಹರಾಗಿದ್ದಾರೆ." (ಪವಿತ್ರ ಕುರ್‌ಆನ್: 2: 273)

ಅಂದರೆ ಧಾರ್ಮಿಕ ಶಿಕ್ಷಣ ಮತ್ತು ಸೇವೆಗಾಗಿ ತನ್ನನ್ನು ಮುಡಿಪಾಗಿರಿಸಿ ಕೊಂಡವರು ಮತ್ತು ತಮ್ಮ ಆರ್ಥಿಕತೆಯ ಬಗ್ಗೆ ಚಿಂತಿಸಲು ಸಮಯಾವಕಾಶ ವಿಲ್ಲದವರು ಮಸಾಕೀನ್‌ಗಳಲ್ಲಿ ಸೇರುತ್ತಾರೆ. ಇದಕ್ಕಿರುವ ಶರ್ತವೇನೆಂದರೆ, ಧರ್ಮದ ಶಿಕ್ಷಣವನ್ನು ತಮ್ಮ ಸಂಪಾದನೆಯ ಉದ್ಯೋಗವನ್ನಾಗಿ ಮಾಡದಿರುವುದು ಅಥವಾ ಸಂಭಾವನೆಯನ್ನು ತನ್ನ ಅಗತ್ಯಕ್ಕಿಂತ ಹೆಚ್ಚು ತೆಗೆದುಕೊಳ್ಳದಿರುವುದು ಹಾಗೂ ಯಾವುದೇ ಪರಿಸ್ಥಿತಿಯಲ್ಲಿ ಸ್ವಾವಲಂಬಿಗಳಾಗದಿರುವವರು. ಈ ರೀತಿ ಧರ್ಮ ಮತ್ತು ಸಮುದಾಯದ ಸೇವೆಗಾಗಿ ತನ್ನನ್ನು ಮುಡಿಪಾಗಿರಿಸಿಕೊಂಡಿರುವ ಯಾವುದೇ ಆರ್ಥಿಕ ಮೂಲ ಹೊಂದಿಲ್ಲದವರೂ ಇದರಲ್ಲಿ ಒಳಪಡುತ್ತಾರೆ.

## ದೃಢೀಕೃತ ದರಿದ್ರರು (ಮಿಸ್ಕೀನ್)

ಆರ್ಥಿಕ ಮೂಲಗಳ ಸೀಮಿತತೆ ಅಥವಾ ಕೊರತೆಯ ಕಾರಣದಿಂದ ಸಂಪಾದನೆಯ ಮಾರ್ಗಗಳು ಮುಚ್ಚಲ್ಪಟ್ಟಿದ್ದು, ಅವರು ಸ್ವತಃ ದುಡಿಯಲು ಉತ್ಸುಕರಾಗಿದ್ದು ಉದ್ಯೋಗವಾಗಲಿ ಇತರ ಸಂಪಾದನೆಯ ಮಾರ್ಗವಾಗಲಿ ಲಭಿಸದವರು. ಇಂಥವರು ಈ ವಿಭಾಗದಲ್ಲಿ ಪ್ರಪ್ರಥಮವಾಗಿ ಸಹಾಯಕ್ಕೆ ಅರ್ಹ ರಾಗಿದ್ದಾರೆ. ಆದರೆ ಅವರ ಸುಧಾರಣೆಯ ವ್ಯವಸ್ಥೆ ಹೇಗೆ ಆಗಬೇಕೆಂದರೆ ಅವರಿಗೆ ಪರಿಹಾರವೂ ಸಿಗಬೇಕು ಮತ್ತು ಇದರಿಂದ ಅವರಲ್ಲಿ ಆಲಸ್ಯ, ಸೋಮಾರಿತನದ ಹವ್ಯಾಸ ಬೆಳೆಯಕೂಡದು. ಈ ನಿಲುವು ಕೇವಲ ಇಂತಹವರ ಬಗ್ಗೆ ಮಾತ್ರವಲ್ಲ, ಇತರೆಲ್ಲಾ ಅಪೇಕ್ಷಿತರಿಗೆ ಸಹಾಯ ಮಾಡುವಾಗಲೂ ಗಮನದಲ್ಲಿರಬೇಕು.

## ದರಿದ್ರರ ವ್ಯಾಪ್ತಿಯಲ್ಲಿ ಬರುವವರು

ಸ್ಥಿತಿವಂತರಾಗಿದ್ದರೂ ವ್ಯಾಪಾರದಲ್ಲಿ ನಷ್ಟ ಅಥವಾ ಯಾವುದೋ ಆಕಸ್ಮಿಕ ಸಂಕಷ್ಟಗಳ ಪರಿಣಾಮ ಬಡತನ ಅನುಭವಿಸುತ್ತಿರುವವರು. ಅವರ ಹಿಂದಿನ ಸುಸ್ಥಿತಿಯ ಕಾರಣಗಳಿಗಾಗಿ ಸಮಾಜದಲ್ಲಿ ಅವರು ಗಣ್ಯರೆಂದು ಪರಿಗಣಿಸಲ್ಪಡುತ್ತಿದ್ದರೂ .ಕರ್ಮಶಾಸ್ತ್ರೀಯವಾಗಿ ಅವರು ದರಿದ್ರರರ ವ್ಯಾಪ್ತಿಯಲ್ಲಿ ಸೇರುತ್ತಾರೆ. ಅಂತಹವರನ್ನೂ ಈ ವಿಭಾಗದಲ್ಲಿ ಸೇರಿಸಿ ಪರಿಹಾರ ಒದಗಿಸಬೇಕು.

## ಗ್ರಂಥ ಮತ್ತು ಪ್ರವಾದಿ ಚರ್ಯೆಯ ವಿವರಣೆಗಳು

ಮೇಲಿನ ವಿವರಣೆಗಳಿಂದ ಝಕಾತ್‌ನ ಪ್ರತೀ ಮೊತ್ತವನ್ನು ಕುರ್‌ಆನ್ ಪ್ರಸ್ತಾಪಿಸುವ ವಿಭಾಗಗಳಲ್ಲಿ ಕಡ್ಡಾಯವಾಗಿ ವಿಂಗಡಿಸಬೇಕೇ ಅಥವಾ ಅಗತ್ಯವಿರುವ ವಿಭಾಗದಲ್ಲಿ ವ್ಯಯಿಸಿದರೂ ಸಾಕಾಗುವುದೇ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಈ ಕುರಿತು ಫುಕಹಾ(ಕರ್ಮಶಾಸ್ತ್ರ ಪಂಡಿತರು)ಗಳಲ್ಲಿ ಭಿನ್ನಾಭಿಪ್ರಾಯಗಳಿವೆ. ಆದರೆ ಹೆಚ್ಚಿನ ವಿದ್ವಾಂಸರ ಅಭಿಪ್ರಾಯದ ಪ್ರಕಾರ ಝಕಾತನ್ನು ಎಲ್ಲಾ ವಿಭಾಗಗಳಲ್ಲಿ

ಒಂದೇ ಸಲ ವಿಂಗಡಿಸುವ ಅಗತ್ಯವಿಲ್ಲ, ಸಂದರ್ಭಾನುಸಾರ ಅಪೇಕ್ಷಿತ ವರ್ಗದ ಪರಿಸ್ಥಿತಿ ಮತ್ತು ಅಗತ್ಯಕ್ಕೆ ತಕ್ಕಂತೆ ವ್ಯಯಿಸಬಹುದಾಗಿದೆ. ಇದುವೇ ಕುರ್‌ಆನ್ ಮತ್ತು ಸುನ್ನತಿನ ಸಾರವಾಗಿದೆ. ನಾಲ್ವರು ಇಮಾಮರ ಪೈಕಿ ಕೇವಲ ಇಮಾಮ್ ಶಾಫಿಈ(ರ)ಯವರು ಈ ಕುರಿತು ಭಿನ್ನ ನಿಲುವು ಹೊಂದಿದ್ದಾರೆ.

## ಖರ್ಚಿನ ಸ್ವಾಭಾವಿಕ ಕ್ರಮಾಂಕ

ಪವಿತ್ರ ಕುರ್‌ಆನ್ ಎಂಟು ವಿಭಾಗಗಳನ್ನು ಪ್ರಸ್ತಾಪಿಸಿರುವ ರೀತಿಯನ್ನು ಗಮನಿಸಿದರೆ, ಇದು ಸ್ವಾಭಾವಿಕ ಕ್ರಮಾಂಕವೆಂದು ತಿಳಿಯುತ್ತದೆ. ಪ್ರಥಮ ಅರ್ಹರಲ್ಲಿ ಎರಡು ವರ್ಗಗಳನ್ನು ಉಲ್ಲೇಖಿಸಲಾಗಿದೆ. ಏಕೆಂದರೆ ಝಕಾತ್‌ನ ಉದ್ದೇಶ ಅಪೇಕ್ಷಿತರ ಸಹಾಯವಾಗಿದೆ. ಆದ್ದರಿಂದ **1. ಫಕೀರ್ (ಬಡವರು)** ಮತ್ತು **2. ಮಿಸ್ಕೀನ್ (ದರಿದ್ರರು)** ಪ್ರಥಮ ಸ್ಥಾನದಲ್ಲಿ ಗುರುತಿಸಲ್ಪಡುತ್ತಾರೆ.

**3. ಝಕಾತ್‌ನ ಸಂಗ್ರಹಕಾರರು:** ಇವರು ಝಕಾತ್‌ನ ಸಂಗ್ರಹ ಮತ್ತು ವಿತರಣಾ ವ್ಯವಸ್ಥೆಗಾಗಿ ನಿಯೋಜಿತರಾಗಿರುವವರು. ಇದು ವ್ಯಕ್ತಿಗತ ಅಗತ್ಯವಲ್ಲದ ಕಾರಣ, ಇವರನ್ನು ಎರಡನೆಯ ಸ್ಥಾನದಲ್ಲಿ ಉಲ್ಲೇಖಿಸಲಾಗಿದೆ.

**4. ಮನವೊಲಿಸಬೇಕಾದವರು:** ನವ ಮುಸ್ಲಿಮರ ವಿಶ್ವಾಸವನ್ನು ಬಲಪಡಿಸಲು ಮತ್ತು ಅವರ ಆರ್ಥಿಕ ಸುಧಾರಣೆಗಾಗಿ ಖರ್ಚು ಮಾಡುವುದು.

**5–6. ಗುಲಾಮತನದ ವಿಮೋಚನೆ ಮತ್ತು ಸಾಲ ಮುಕ್ತಿ:** ಗುಲಾಮರನ್ನು ಸ್ವತಂತ್ರಗೊಳಿಸುವುದು ಮತ್ತು ಸಾಲಗಾರರನ್ನು ಸಾಲದ ಹೊರೆಯಿಂದ ಮುಕ್ತಿಗೊಳಿಸುವ ಉದ್ದೇಶಕ್ಕೆ ಖರ್ಚು ಮಾಡುವುದು.

**7. ಅಲ್ಲಾಹನ ಮಾರ್ಗದ ಖರ್ಚು:** ಈ ಮೇಲೆ ವಿವರಿಸಿರುವ ವಿಭಾಗಗಳಲ್ಲಿ ಅರ್ಹ ಜನರ ಕೊರತೆಯಿದ್ದರೆ ಅಥವಾ ಸಾಂದರ್ಭಿಕ ಬೇಡಿಕೆಯಂತೆ ಅವರ ಪ್ರಾಮುಖ್ಯತೆ ಕಡಿಮೆಯಾಗಿದ್ದರೆ ಅಥವಾ ಝಕಾತ್‌ನ ಮೊತ್ತ ಯಥೇಷ್ಟವಾಗಿದ್ದರೆ, ಇಲ್ಲಿ ಒಂದು ಸಮಗ್ರ ಮತ್ತು ಪ್ರಬಲ ಉದ್ದೇಶದ ಬಾಗಿಲನ್ನು ತೆರೆಯಬೇಕಾಗುತ್ತದೆ. ಇದರಲ್ಲಿ ಧರ್ಮ ಮತ್ತು ಸಮುದಾಯದ ಸರ್ವ ಹಿತಾಸಕ್ತಿಗಳು ಬರುತ್ತವೆ.

**ವಿವರಣೆ:** ಕುರ್‌ಆನಿನ ಪರಿಭಾಷೆಯಲ್ಲಿ ಧರ್ಮ ಮತ್ತು ಸಮುದಾಯದ ರಕ್ಷಣೆ, ಸಬಲೀಕರಣಕ್ಕಾಗಿ ಕೈಗೊಳ್ಳುವ ಎಲ್ಲಾ ಕಾರ್ಯಗಳು ಅಲ್ಲಾಹನ ಮಾರ್ಗದ ಕಾರ್ಯಗಳಾಗಿವೆ. ಸಮುದಾಯದ ನಿರ್ಮಾಣ ಮತ್ತು ಪೋಷಣೆಯಲ್ಲಿ ಅತ್ಯಗತ್ಯದ ಕಾರ್ಯ ಸಂರಕ್ಷಣೆಯಾಗಿರುವುದರಿಂದ ಝಕಾತ್ ಇದಕ್ಕೆ ಹೆಚ್ಚು ಅನ್ವಯವಾಗು ತ್ತದೆ. ಆದ್ದರಿಂದ ರಕ್ಷಣೆಯ ಬೇಡಿಕೆಯ ಸಂದರ್ಭ ಸಮುದಾಯದ ನಾಯಕತ್ವವು ಝಕಾತ್‌ನಿಂದ ಸಹಾಯ ಪಡೆಯುವ ಅಗತ್ಯತೆ ಮನಗಂಡರೆ ಅದರಿಂದ

ವ್ಯಯಿಸಬೇಕು. ಅದಲ್ಲದೆ ಧರ್ಮ ಮತ್ತು ಸಮುದಾಯದ ಸಾಮಾನ್ಯ ಹಿತಾಸಕ್ತಿಯ ಕಾರ್ಯ ಚಟುವಟಿಕೆಗಳಿಗೆ ಝಕಾತ್‌ನ ಮೊತ್ತವನ್ನು ವ್ಯಯಿಸಬಹುದಾಗಿದೆ. ಉದಾ: ಕುರ್‌ಆನ್ ಮತ್ತು ಧಾರ್ಮಿಕ ಶಿಕ್ಷಣದ ಪ್ರಸಾರಕ್ಕಾಗಿ, ಮದ್ರಸಾಗಳ ಸ್ಥಾಪನೆ, ಸಂದೇಶ ಪ್ರಚಾರಕರ ನೇಮಕಾತಿ, ಸಮುದಾಯದ ಮಾರ್ಗದರ್ಶನಕ್ಕಾಗಿ ಸರ್ವ ಸಂಪನ್ಮೂಲಗಳನ್ನು ಒದಗಿಸಲು ಬಳಸಬಹುದಾಗಿದೆ.[1]

**8. ಪ್ರಯಾಣಿಕರ ಸತ್ಕಾರ:** ಇದು ಕಡಿಮೆ ಸಂದರ್ಭದಲ್ಲಿ ಯಾತ್ರಿಕನೋರ್ವನ ಆದ್ಯತೆಯ ನೆಲೆಯಲ್ಲಿ ಮಾಡುವ ಖರ್ಚಾಗಿದೆ.

## ಇಸ್ಲಾಮೀ ಜೀವನದ ಪ್ರಪ್ರಥಮ ಗುರುತು

ಅಪೇಕ್ಷಿತರ ಸಹಾಯ ಮತ್ತು ತನ್ನ ಸಮುದಾಯದ ಸೇವೆಯನ್ನು ಬೋಧಿಸದ ಅದನ್ನು ಆರಾಧನೆಯ ಭಾಗವೆಂದು ಪರಿಗಣಿಸದ ಯಾವುದೇ ಧರ್ಮ ಈ ಲೋಕದಲ್ಲಿಲ್ಲ. ಆದರೆ ಇಸ್ಲಾಮಿನ ವಿಶೇಷತೆಯೇನೆಂದರೆ ಅದನ್ನು ಇಷ್ಟಕ್ಕೇ ಸೀಮಿತಗೊಳಿಸದೆ, ಸಾಮರ್ಥ್ಯವುಳ್ಳ ಪ್ರತೀಯೋರ್ವ ಮುಸ್ಲಿಮನ ಮೇಲೆ ಒಂದು ವಿಶೇಷ 'ಕರ' ಎಂಬಂತೆ ನಿರ್ಧರಿಸಿದೆ. ಆತನು ತನ್ನ ಎಲ್ಲಾ ಆದಾಯಗಳನ್ನು ಲೆಕ್ಕ ಹಾಕಿ ಪ್ರತಿ ವರ್ಷ 'ಝಕಾತ್' ಪಾವತಿಸಬೇಕಾಗಿದೆ. ಇದಕ್ಕೆ ಎಷ್ಟು ಪ್ರಾಮುಖ್ಯತೆ ನೀಡಲಾಗಿದೆಯೆಂದರೆ ಸತ್ಕರ್ಮಗಳ ಪೈಕಿ ಝಕಾತ್‌ಗೆ ನಮಾಝಿನ ನಂತರದ ಸ್ಥಾನವಿದೆ. ಕುರ್‌ಆನ್ ಇವೆರಡೂ ಕಾರ್ಯಗಳನ್ನು ಒಟ್ಟೊಟ್ಟಿಗೇ ಪ್ರಸ್ತಾಪಿಸಿದೆ. ಯಾವುದೇ ಸಂಘಟನೆಯ ಇಸ್ಲಾಮೀ ಜೀವನದ ಪ್ರಪ್ರಥಮ ಗುರುತು ಇವೆರಡು (ನಮಾಝ್ ಮತ್ತು ಝಕಾತ್) ಕಾರ್ಯಗಳಾಗಿವೆಯೆಂದು ಸ್ಪಷ್ಟ.

## ಉಲ್ಲಂಘನೆಯ ಶಿಕ್ಷೆ

ಆದುದರಿಂದ ಯಾವುದೇ ಸಮಾಜ ಸಾಮೂಹಿಕವಾಗಿ ಮಾಡಬೇಕಾಗಿರುವ ಕರ್ಮಗಳನ್ನು ತ್ಯಜಿಸಿದರೆ ಆ ಸಮಾಜವನ್ನು 'ಮುಸ್ಲಿಮ್' ಎಂದು ಪರಿಗಣಿಸಲಾಗದು, ಆದ್ದರಿಂದಲೇ ಸಹಾಬಿಗಳು ಝಕಾತ್ ವಿರೋಧಿಗಳೊಂದಿಗೆ ಯುದ್ಧ ಹೂಡಿದರು. ಹಝ್ರತ್ ಅಬೂಬಕರ್(ರ)ರವರು ಹೇಳಿದರು, "ಅಲ್ಲಾಹನಾಣೆ, ನಮಾಝ್ ಮತ್ತು ಝಕಾತನ್ನು ಪ್ರತ್ಯೇಕಿಸುವ ಪ್ರತಿಯೋರ್ವನೊಂದಿಗೆ ನಾನು ಧರ್ಮಯುದ್ಧ ಸಾರುವೆನು."

(ಮುತ್ತಫಕ್ ಅಲೈಹಿ)

1. ಫುಕಹಾ ಮತ್ತು ವ್ಯಾಖ್ಯಾನಕಾರರ ಒಂದು ವರ್ಗ ಇದೇ ನಿಲುವು ತಾಳಿದೆ, ಕೆಲವರಂತೂ ಇದನ್ನು ಮಸೀದಿ, ಬಾವಿ, ಸೇತುವೆ ಮತ್ತು ಎಲ್ಲಾ ರೀತಿಯ ಆಂಶಿಕ ನಿರ್ಮಾಣ ಕಾರ್ಯಗಳಿಗೆ ವ್ಯಾಪಕಗೊಳಿಸಿದ್ದಾರೆ. ಪದದ ಅರ್ಥವು ಸಾಮಾನ್ಯವಾಗಿರುವುದರಿಂದ ಅದನ್ನು ಯಾವುದೇ ವಿಶೇಷ ಕಾರ್ಯಕ್ಕೆ ಸೀಮಿತಗೊಳಿಸುವುದು ಸರಿಯಲ್ಲ, ಇದರಲ್ಲಿ ಶವ ದಫನದಿಂದ ಹಿಡಿದು ಮಸೀದಿ, ಆವರಣ ಗೋಡೆ ಮತ್ತು ಕೋಟೆಗಳ ನಿರ್ಮಾಣದವರೆಗೆ ಒಳಿತಿನ ಎಲ್ಲಾ ವಿಷಯಗಳು ಸೇರಿವೆಯೆಂದು ಹೇಳಲಾಗಿದೆ. (ನೈಲುಲ್ ಔತಾರ್) ಹನಫೀ ಫಿಕ್ಹ್ ಗ್ರಂಥಗಳ ಪೈಕಿ 'ಫತಾವಾ ಅಝ್ಝುರಿ'ಯಲ್ಲಿ ಇದರ ಅರ್ಥ 'ಜ್ಞಾನಾರ್ಜನೆ' ಎಂದು ಬರೆಯಲಾಗಿದೆ. ಆರಂಭಕಾಲದ ಜನರ ಅಭಿಪ್ರಾಯದಲ್ಲಿ ಒಳಿತು ಮತ್ತು ದಾನಧರ್ಮದ ಎಲ್ಲಾ ಕಾರ್ಯಗಳು ಸೇರಿವೆ.

## ಝಕಾತ್‌ನ ಧ್ಯೇಯೋದ್ದೇಶಗಳು

ಝಕಾತ್ ಮಾತ್ರವಲ್ಲ, ಎಲ್ಲಾ ರೀತಿಯ ದಾನ ಧರ್ಮಗಳ ಉದ್ದೇಶವೇನೆಂದರೆ, ಸಂಪತ್ತು ಕೇವಲ ಶ್ರೀಮಂತರಲ್ಲಿ ಮಾತ್ರ ಚಲಿಸುತ್ತಿರಬಾರದೆಂದಾಗಿದೆ.

كَيْ لَا يَكُونَ دُولَةً بَيْنَ الْأَغْنِيَاءِ مِنكُمْ

"ಸಂಪತ್ತು ನಿಮ್ಮ ಶ್ರೀಮಂತರ ನಡುವೆ ಮಾತ್ರ ಚಲಿಸುತ್ತ ಇರಬಾರದೆಂದು ಹೀಗೆ ಮಾಡಲಾಗಿದೆ." (ಪವಿತ್ರ ಕುರ್‌ಆನ್: 59: 7)

ಅಂದರೆ ಸಂಪತ್ತಿನ ಚಲಾವಣೆ ಎಲ್ಲರಲ್ಲಿಯೂ ವಿಸ್ತರಿಸಲಿ, ಎಲ್ಲರಿಗೂ ಹಂಚಲ್ಪಡಲಿ, ಯಾವುದೇ ಒಂದು ವರ್ಗದ ಗುತ್ತಿಗೆ ಆಗದಿರಲಿ ಎಂಬುದು ಝಕಾತ್‌ನ ಉದ್ದೇಶವಾಗಿದೆ. ಸೂರಾ ತೌಬಾದದಲ್ಲಿ ಉಲ್ಲೇಖಿಸಿದೆ:

وَالَّذِينَ يَكْنِزُونَ الذَّهَبَ وَالْفِضَّةَ وَلَا يُنفِقُونَهَا فِي سَبِيلِ اللَّهِ
فَبَشِّرْهُم بِعَذَابٍ أَلِيمٍ ﴿٣٤﴾

"ಚಿನ್ನವನ್ನೂ ಬೆಳ್ಳಿಯನ್ನೂ ಸಂಗ್ರಹಿಸಿಟ್ಟು ಅವುಗಳನ್ನು ದೇವ ಮಾರ್ಗದಲ್ಲಿ ಖರ್ಚು ಮಾಡದವರಿಗೆ ವೇದನಾಯುಕ್ತ ಯಾತನೆಯ ಸುವಾರ್ತೆ ನೀಡಿರಿ." (ಪವಿತ್ರ ಕುರ್‌ಆನ್: 9: 34)

ಮುಆಝ್‌ರನ್ನು ಯಮನ್‌ಗೆ ಕಳುಹಿಸುವಾಗ ಹೇಳಿದ ಹದೀಸಿನಲ್ಲಿ ಝಕಾತ್‌ನ ಉದ್ದೇಶ ಈ ರೀತಿಯಲ್ಲಿದೆ:

"ಅವರ ಧನಿಕರಿಂದ ವಸೂಲಿ ಮಾಡಿ ಅವರ ಅಪೇಕ್ಷಿತರಲ್ಲಿ ವಿತರಿಸಲ್ಪಡಬೇಕು." (ಬುಖಾರಿ, ಮುಸ್ಲಿಮ್)



# ಕಾಳಸಂತೆ ಮತ್ತು ಅಕ್ರಮ ದಾಸ್ತಾನು ಬಗ್ಗೆ ಕುರ್‌ಆನ್

## ಕುರ್‌ಆನ್‌ನ ಸ್ಫೂರ್ತಿ ಮತ್ತು ವಾರೀಸು ಸೊತ್ತಿನ ವಿತರಣೆ

ಸೀಮಿತ ಕೈಗಳಲ್ಲಿ ಸಂಪತ್ತು ಶೇಖರಣೆಯು ಕುರ್‌ಆನಿನ ಸ್ಫೂರ್ತಿಗೆ ವಿರುದ್ಧವಾಗಿದೆ. ಅಂದರೆ ಯಾವುದೇ ಒಂದು ವರ್ಗದ ಒಡೆತನದಲ್ಲಿ ಸಂಪತ್ತು ಶೇಖರಿಸಲ್ಪಡುವುದು ಅಥವಾ ಸಂಪತ್ತನ್ನು ಖಜಾನೆಯ ರೂಪದಲ್ಲಿ ಶೇಖರಿಸುವ ಒಂದು ವರ್ಗ ಸೃಷ್ಟಿಯಾಗುವುದನ್ನು ಕುರ್‌ಆನ್ ಬಯಸುವುದಿಲ್ಲ. ಬದಲಾಗಿ ಸಂಪತ್ತು ಸದಾ ಚಲಾವಣೆಯಾಗುತ್ತಿರಬೇಕು ಮತ್ತು ಸಮಾಜದಲ್ಲಿ ಆದಷ್ಟು ಹೆಚ್ಚು ಜನರಿಗೆ ಅದು ವಿತರಣೆ ಮತ್ತು ವಿಂಗಡನೆಯಾಗಬೇಕೆಂದು ಕುರ್‌ಆನ್ ಬಯಸುತ್ತದೆ.

ಈ ಕಾರಣಕ್ಕಾಗಿಯೇ ವಾರೀಸುದಾರರ ಮೇಲೆ 'ವಾರೀಸು ಸೊತ್ತು' ವಿತರಣೆಯ ಕಾನೂನನ್ನು ಜಾರಿಗೊಳಿಸಿತು ಹಾಗೂ ಜಗತ್ತಿನ ವಿವಿಧ ರಾಷ್ಟ್ರಗಳಲ್ಲಿ ಅಲ್ಲಿಯ ಪ್ರಚಲಿತ ಕಾನೂನಿನಂತೆ ಒಂದು ಕುಟುಂಬದ ಸೊತ್ತು ಓರ್ವ ವ್ಯಕ್ತಿಯ ಒಡೆತನದಲ್ಲಿ ರುವಂತೆ ಮಾಡಲಿಲ್ಲ. ಬದಲಾಗಿ ಓರ್ವ ವ್ಯಕ್ತಿ ಮೃತನಾದ ಕೂಡಲೇ ಆ ತನಕ ಅವನೊಬ್ಬನ ವಶದಲ್ಲಿದ್ದ ಒಂದು ಸ್ಥಳದ ಸಂಪತ್ತು, ವಾರೀಸುದಾರರಲ್ಲಿ ವಿಂಗಡನೆಯಾಗಿ ಹಲವು ಸ್ಥಳಗಳಲ್ಲಿ ಹರಡುತ್ತದೆ ಮತ್ತು ಅವರಲ್ಲಿಯೂ ಪ್ರತಿಯೊಬ್ಬನ ವಾರೀಸುದಾರರಿರಬಹುದು. ಅದು ಅಲ್ಲಿಯೂ ವಿಂಗಡನೆ ಮತ್ತು ವಿಸ್ತರಣೆಯಾಗುತ್ತಿರುತ್ತದೆ.

## ಬಡ್ಡಿ ನಿಷೇಧದ ಯುಕ್ತಿ

ಪವಿತ್ರ ಕುರ್‌ಆನಿನಲ್ಲಿ يَمْحَقُ اللَّهُ الرِّبَا وَيُرْبِي الصَّدَقَاتِ "ಅಲ್ಲಾಹನು ಬಡ್ಡಿಯ ವ್ಯವಹಾರವನ್ನು ಅಳಿಸಿಬಿಡುತ್ತಾನೆ ಮತ್ತು ದಾನ ಧರ್ಮಗಳ ವೃದ್ಧಿಸುತ್ತಾನೆ" **(ಪವಿತ್ರ ಕುರ್‌ಆನ್: 2: 276)** ಎಂದು ಹೇಳಲಾಗಿದೆ. ಸೂಕ್ತದ ಇವೆರಡು ವಿಷಯಗಳು ಪರಸ್ಪರ ತದ್ವಿರುದ್ಧವಾಗಿವೆ. ಅಂದರೆ ಬಡ್ಡಿಯ ಚಪಲ ಬೆಳೆಯುವ ಕೋಮಿನಲ್ಲಿ ಅದರ ಹೆಚ್ಚಿನ ಜನರು ಕಠೋರ ಹೃದಯದವರೂ ನಿರಾಶಾವಂತರೂ ಆಗುವರು. ದಾನಧರ್ಮದ ಸ್ಫೂರ್ತಿ ವೃದ್ಧಿಸುವ ಕೋಮಿನಲ್ಲಿ ಬಡವರು ದರಿದ್ರರು ಇರಲಾರರು.

ಆದ್ದರಿಂದಲೇ ಅಲ್ಲಾಹನು ಬಡ್ಡಿ ವ್ಯವಹಾರದ ಕುರಿತು ಎಷ್ಟೊಂದು ಕಠೋರ

ನಿಲುವು ತಾಳಿದನೆಂದರೆ 'ಬಡ್ಡಿ ವ್ಯವಹಾರದಲ್ಲಿ ಸ್ಥಿರವಾಗಿರುವವರು ಅಲ್ಲಾಹನ ಮತ್ತು ಪ್ರವಾದಿಗಳ ವಿರುದ್ಧ ಯುದ್ಧ ಸಾರುವವರಾಗಿದ್ದಾರೆ' ಎಂದು ಘೋಷಿಸಿದ್ದಾನೆ.

فَإِن لَّمْ تَفْعَلُوا فَأْذَنُوا بِحَرْبٍ مِّنَ اللَّهِ وَرَسُولِهِ

"(ಬಡ್ಡಿ ನಿಷೇಧದ ಬಳಿಕವೂ) ನೀವು ಹಾಗೆ ಮಾಡದಿದ್ದರೆ ಅಲ್ಲಾಹನು ಮತ್ತು ಅವರ ಸಂದೇಶವಾಹಕರ ಕಡೆಯಿಂದ ನಿಮ್ಮ ವಿರುದ್ಧ ಯುದ್ಧ ಘೋಷಣೆಯಿದೆಯೆಂದು ನಿಮಗೆ ತಿಳಿದಿರಲಿ." (ಪವಿತ್ರ ಕುರ್‌ಆನ್: 2: 279)

ಈ ವಿಷಯವು ಸಾಮಾಜಿಕ ಕಲ್ಯಾಣದ ಮೂಲ ಬುನಾದಿಯಾಗಿದ್ದುದರಿಂದ ಅದನ್ನು ವಿಶ್ವಾಸ ಮತ್ತು ವಿಧೇಯತೆಯ ಮಾನದಂಡವೆಂದು ಸಾರುವ ಅಗತ್ಯವಿತ್ತು.

## ಅಲ್ಲಾಹನ ಮಾರ್ಗದಲ್ಲಿ ವ್ಯಯಿಸುವುದರ ಯುಕ್ತಿ

ಸೂರ ಅಲ್ ಬಕರದಲ್ಲಿ ಇನ್ಫಾಕ್‌ನ ಆದೇಶ ನೀಡಿದ ಕೂಡಲೇ ಹೇಳಲಾಯಿತು,

يُؤْتِي الْحِكْمَةَ مَن يَشَاءُ ۚ وَمَن يُؤْتَ الْحِكْمَةَ فَقَدْ أُوتِيَ خَيْرًا كَثِيرًا ۗ
وَمَا يَذَّكَّرُ إِلَّا أُولُو الْأَلْبَابِ ﴿٢٦٩﴾

"ಅವನು ತನಗಿಷ್ಟ ಬಂದವರಿಗೆ ಸದ್ವಿವೇಕ ಪ್ರದಾನ ಮಾಡುತ್ತಾನೆ, ಸದ್ವಿವೇಕ ಪ್ರಾಪ್ತವಾದವನಿಗೆ ವಾಸ್ತವದಲ್ಲಿ ಮಹಾ ಸಂಪತ್ತು ಪ್ರಾಪ್ತವಾಯಿತೆಂದೇ ಅರ್ಥ. ಇವುಗಳಿಂದ ಬುದ್ಧಿಜೀವಿಗಳು ಮಾತ್ರ ಉಪದೇಶ ಪಡೆಯುತ್ತಾರೆ."

(ಪವಿತ್ರ ಕುರ್‌ಆನ್ 2: 269)

ಅಂದರೆ ತನ್ನ ಸಂಪಾದನೆಯ ಒಂದು ಭಾಗವನ್ನು ಸಮುದಾಯದ ಇತರರಿಗೆ ನೀಡುವುದರಲ್ಲಿ ಆತನು ಕಳೆದುಕೊಳ್ಳುವುದಲ್ಲ ಬದಲಾಗಿ ಗಳಿಸುವುದಾಗಿದೆಯೆಂಬುದು ಇದರ ಸೂಕ್ಷ್ಮಾರ್ಥವಾಗಿದೆ. ಇದನ್ನು ಯುಕ್ತಿವಂತರು ಮಾತ್ರ ಗ್ರಹಿಸಬಲ್ಲರು. ಯಾರಿಗೆ ಈ ಯುಕ್ತಿ ಲಭಿಸಿತೋ ಅವನು ಬಹು ದೊಡ್ಡ ಒಳಿತನ್ನು ಪಡೆದನು.[1]

## ಇಸ್ಲಾಮೀ ಸಮಾಜದ ವಿಶೇಷತೆ

ಕುರ್‌ಆನ್ ಮತ್ತು ಸುನ್ನತ್‌ನ ಶಿಕ್ಷಣ ಹಾಗೂ ಸಹಾಬಿಗಳ ಪ್ರಾಯೋಗಿಕ ಜೀವನದ ಅಧ್ಯಯನದಿಂದ ನಾನು ಪೂರ್ಣವಾಗಿ ಗ್ರಹಿಸಿರುವುದೇನೆಂದರೆ, ಇಸ್ಲಾಮ್ ರಚಿಸುವ ಸಾಮುದಾಯಿಕ ನಕಾಶೆಯಲ್ಲಿ ಸಂಪತ್ತು ಮತ್ತು ಸಂಪನ್ಮೂಲಗಳ

1. ಝಕಾತ್ ಮತ್ತು ದಾನಧರ್ಮಗಳ ಕುರಿತು ಕುರ್‌ಆನ್ ಹೇಳಿರುವ ತಾತ್ಪರ್ಯ ಮತ್ತು ಸೂಕ್ಷ್ಮತೆ ಅಗಣಿತವಾದುದು. ದುರದೃಷ್ಟವಶಾತ್, ವ್ಯಾಖ್ಯಾನಕಾರರ ಗಮನ ಬೇರೆಡೆಗೆ ಹರಿಯಿತು. ಇಲ್ಲಿ ಅದರ ವಿವರಣೆಗೆ ಅವಕಾಶವಿಲ್ಲ.

ಕೇಂದ್ರೀಕರಣ ಮತ್ತು ಶೇಖರಣೆಗೆ ಯಾವುದೇ ಅವಕಾಶವಿಲ್ಲ. ಕೇಂದ್ರೀಕರಣ ಎಂದರೆ ಯಾವುದಾದರೂ ಒಂದು ವರ್ಗಕ್ಕೆ ಸೀಮಿತವಾಗಿರುವುದು, ಶೇಖರಣೆಯೆಂದರೆ ಕೆಲವೇ ಕೈಗಳಲ್ಲಿ ದೊಡ್ಡ ದೊಡ್ಡ ಖಜಾನೆಗಳು ಜಮೆಯಾಗುವುದು. ಇಸ್ಲಾಮಿನ ಶಿಕ್ಷಣದಂತೆ ಸಾಮಾಜಿಕ ವ್ಯವಸ್ಥೆಯು ಸ್ಥಾಪಿಸಲ್ಪಟ್ಟರೆ, ಸಮಾಜದಲ್ಲಿ ಅತೀ ಶ್ರೀಮಂತ ಕೋಟ್ಯಾಧಿಪತಿಗಳಿರಲಾರರು ಹಾಗೂ ಹೆಚ್ಚು ದರಿದ್ರರೂ, ಬಡ ವರ್ಗಗಳೂ ಇರಲಾರವು. ಒಂದು ರೀತಿಯಲ್ಲಿ ಮಧ್ಯಮ ವರ್ಗಗಳ ಬಾಹುಳ್ಯದ ಒಂದು ಸಾಮೂಹಿಕ ಸುವ್ಯವಸ್ಥೆ ಅಸ್ತಿತ್ವಕ್ಕೆ ಬರಬಹುದು.

ಪರಿಶ್ರಮ ಮತ್ತು ಸಂಪಾದನೆಯಿಲ್ಲದೆ ಓರ್ವ ಸತ್ಯವಿಶ್ವಾಸಿ ಜೀವಂತವಿರ ಲಾರನು, ಆದ್ದರಿಂದ ಸಂಪಾದಿಸುವವರೇ ಹೆಚ್ಚಿನ ಸಂಖ್ಯೆಯಲ್ಲಿರುವರು. ಆದರೆ ಹೆಚ್ಚು ಸಂಪಾದಿಸುವವನು ಹೆಚ್ಚು ವ್ಯಯಿಸಲೂ ನಿರ್ಬಂಧಿಸಲ್ಪಡುವನು. ಈ ರೀತಿ ವ್ಯಕ್ತಿಗಳ ಸಂಪಾದನೆ ಹೆಚ್ಚಿದಷ್ಟು ಸಮಾಜದ ಸಾಮೂಹಿಕ ಆರ್ಥಿಕ ಪರಿಸ್ಥಿತಿ ಉತ್ತಮಗೊಳ್ಳುವುದು. ಅರ್ಹ ಮತ್ತು ಸಮರ್ಥ ವ್ಯಕ್ತಿಗಳು ಹೆಚ್ಚೆಚ್ಚು ಸಂಪಾದಿಸುವರು, ಕೇವಲ ತನಗಾಗಿ ಮಾತ್ರವಲ್ಲ, ಸಮಾಜದ ಸರ್ವರಿಗಾಗಿ ಶ್ರಮಿಸುತ್ತಿರುವರು. ಈಗಿರುವ ವ್ಯವಸ್ಥೆಯಂತೆ ಒಂದು ವರ್ಗದ ಸಂಪಾದನೆ ಇನ್ನೊಂದು ವರ್ಗದ ಬಡತನ, ದಾರಿದ್ರ್ಯದ ಪರಿಸ್ಥಿತಿ ನಿರ್ಮಾಣಕ್ಕೆ ಕಾರಣ ವಾಗಲಾರದು.

## ಸಾಮೂಹಿಕ ಸಂಕಷ್ಟಗಳ ಪರಿಹಾರ

ಕುರ್‌ಆನಿನ ಶಿಕ್ಷಣದಂತೆ ಲೋಕದಲ್ಲಿ ನಾಗರಿಕತೆ ಮತ್ತು ಸಮಾಜ ನಿರ್ಮಾಣ ವಾಗಬೇಕಾದುದು ಎಷ್ಟು ಪ್ರಾಮುಖ್ಯವೋ ಅಷ್ಟೇ ಅದು ದುರ್ಲಭವೂ ಹೌದು. ಇಂದು ಮುಸ್ಲಿಮರು ಬೇರೇನನ್ನೂ ಮಾಡದೆ ಕೇವಲ ಝಕಾತ್‌ನ ವಿಷಯವನ್ನು ಕುರ್‌ಆನಿನ ಆದೇಶಗಳ ಪ್ರಕಾರ ಸರಿಪಡಿಸಿಕೊಂಡರೆ ಸಮುದಾಯದ ಸರ್ವ ಸಂಕಷ್ಟಗಳು ಪರಿಹಾರಗೊಳ್ಳುವುದು ಎಂಬುದರಲ್ಲಿ ಯಾವುದೇ ಸಂದೇಹವಿಲ್ಲ. ಆದರೆ ಸಮಸ್ಯೆಯೇನೆಂದರೆ ಮುಸ್ಲಿಮರು ಕುರ್‌ಆನಿನ ಆದೇಶಗಳನ್ನು ಒಂದೋ ಕೈ ಬಿಟ್ಟಿದ್ದಾರೆ ಅಥವಾ ಪಾಲಿಸಿದರೂ ಫಲಪ್ರದವಾದ ರೀತಿಯಲ್ಲಿಲ್ಲ.



# ಝಕಾತ್‌ನ ಶರೀಅತ್ ವ್ಯವಸ್ಥೆ

## ತೆರಿಗೆ ಮತ್ತು ಅದರ ಪಾವತಿ

ಕುರ್‌ಆನ್ ಝಕಾತನ್ನು ಒಂದು ವಿಶೇಷ ವ್ಯವಸ್ಥೆಯೊಂದಿಗೆ ಜೋಡಿಸಿದೆ. ಆ ವ್ಯವಸ್ಥೆಯ ಸ್ಥಾಪನೆಯಲ್ಲಿಯೇ ಅದರ ಎಲ್ಲಾ ಉದ್ದೇಶ ಮತ್ತು ಹಿತಾಸಕ್ತಿಗಳು ಅಡಗಿವೆ. ಇಂದು ವಸೂಲಿಯಾಗುತ್ತಿರುವ ಆದಾಯ ತೆರಿಗೆಯಂತೆ ಝಕಾತ್ ಕೂಡಾ ಒಂದು ವಿಧದ ತೆರಿಗೆಯಾಗಿದೆ. ಆದರೆ ಅದರ ಪಾವತಿ ಇಂದು ನಾವು ನೋಡುತ್ತಿರುವ ರೀತಿಯಲ್ಲಲ್ಲ. ಇಂದು ಸರಕಾವು ಜನರಿಂದ ತೆರಿಗೆ ಪಡೆದು ಸ್ವತಃ ಸರಕಾರವೇ ಖರ್ಚು ಮಾಡಿಬಿಡುತ್ತದೆ. ಆದರೆ ಇಸ್ಲಾಮೀ ಸರಕಾರವು ತನ್ನ ಸಿಬ್ಬಂದಿಗಳ ಮೂಲಕ ಪ್ರತಿಯೋರ್ವನಿಂದ ಝಕಾತ್ ವಸೂಲು ಮಾಡಿ 'ಬೈತುಲ್‌ಮಾಲ್'ನಲ್ಲಿ ಜಮೆ ಮಾಡುತ್ತದೆ. ನಂತರ ಅದನ್ನು ಸಂದರ್ಭಾನುಸಾರ ಅಪೇಕ್ಷಿತ ವಿಭಾಗಗಳಿಗೆ ಖರ್ಚು ಮಾಡುತ್ತದೆ. ಓರ್ವನು ಸರಕಾರ ನೇಮಿಸಿದ ಸಿಬ್ಬಂದಿಗಳ ಬಳಿ ತನ್ನ ಪಾಲಿನ ಝಕಾತ್ ನೀಡುವುದರೊಂದಿಗೆ ಆತನ ಝಕಾತ್ ಪಾವತಿಯಾಯಿತು. ಆದ್ದರಿಂದಲೇ ಝಕಾತ್ ಸಂಗ್ರಹಕಾರನ ವೇತನವನ್ನು ಝಕಾತ್ ನಿಧಿಯಿಂದ ಭರಿಸುವ ಬಗ್ಗೆ وَالْعَامِلِينَ عَلَيْهَا "ಝಕಾತ್ ಸಂಗ್ರಹಕ್ಕಾಗಿ ನೇಮಿಸಲ್ಪಟ್ಟವರ ಅಗತ್ಯ ಖರ್ಚು (ಇದರಿಂದಲೇ ಪಾವತಿಸಲ್ಪಡಬೇಕು)" ಎಂದು ಸ್ಪಷ್ಟವಾಗಿ ಆದೇಶಿಸಲಾಗಿದೆ. ಝಕಾತ್ ಪಾವತಿಗೆ ಸಿಬಂದಿಗಳ ಅಗತ್ಯವಿಲ್ಲದಿರುತ್ತಿದ್ದರೆ ಅದರ ಫಲಾನುಭವಿಗಳ ಯಾದಿಯಲ್ಲಿ ಝಕಾತ್ ಸಂಗ್ರಹಕಾರರ ಹೆಸರು ಶಾಶ್ವತವಾಗಿ ಇರುತ್ತಿರಲಿಲ್ಲ.

## ಸರಕಾರಿ ಅಧಿಕಾರಿಗಳ ಆಜ್ಞಾಪಾಲನೆಯ ಆದೇಶ

ಝಕಾತ್ ವಸೂಲಿಗೆ ಸರಕಾರದಿಂದ ನೇಮಿಸಲ್ಪಟ್ಟ ಸಿಬಂದಿಗಳ ಆದೇಶವನ್ನು ಪಾಲಿಸುವಂತೆ ಮತ್ತು ಯಾವುದೇ ನೆಪವಿಲ್ಲದೆ, ತಂತಮ್ಮ ಪಾಲಿನ ಝಕಾತನ್ನು ಅವರ ವಶಕ್ಕೆ ಒಪ್ಪಿಸಿ ಬಿಡಬೇಕು ಎಂದು ಮುಸ್ಲಿಮರಿಗೆ ಆಜ್ಞಾಪಿಸಲಾಯಿತು. ನೇಮಿಸಲ್ಪಟ್ಟ ಸಿಬಂದಿಗಳು ಅಕ್ರಮಿಗಳಾಗಿದ್ದರೂ ಅಥವಾ 'ಬೈತುಲ್

ಮಾಲ್‌ನಿಂದ ಸರಿಯಾದ ರೀತಿಯಲ್ಲಿ ವ್ಯಯವಾಗದಿದ್ದರೂ ಪರಿಸ್ಥಿತಿಯನ್ನು ಸುಧಾರಿಸುವ ಪ್ರಯತ್ನಗಳೊಂದಿಗೆ ಪಾವತಿ ಪ್ರಕ್ರಿಯೆಗಳು ಜಾರಿಯಲ್ಲಿರಬೇಕು. ಇದರ ಬದಲು ತನ್ನಿಷ್ಟದಂತೆ ಝಕಾತನ್ನು ವೈಯಕ್ತಿಕವಾಗಿ ಖರ್ಚು ಮಾಡಬಾರದು.

ಬಶೀರ್ ಬಿನ್ ಖಸಾಸ ವರದಿ ಮಾಡಿರುವರು, "ಜನರು ಹೇಳಿದರು: ಸಿಬ್ಬಂದಿಗಳ ಒಂದು ವರ್ಗ ನಮ್ಮಿಂದ ಸದಕಾ ಪಡೆಯುವುದರಲ್ಲಿ ಅಕ್ರಮವೆಸಗುತ್ತಿದ್ದಾರೆ, ನಾವು ಅವರೊಂದಿಗೆ ಹೋರಾಡಬೇಕೇ? ಉತ್ತರವಾಗಿ ಇಲ್ಲವೆಂದು ಹೇಳಲಾಯಿತು." (ಅಬೂ ದಾವೂದ್)

## ಕಾಲದ ಆಡಳಿತಾಧಿಕಾರಿ ಅಕ್ರಮಿ, ದುಷ್ಟನಾಗಿದ್ದರೆ

ಸಅದ್ ಬಿನ್ ಅಬೀ ವಕಾಸ್‌ರ ವರದಿಯಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ, "ಅವರು (ಝಕಾತ್ ಸಂಗ್ರಹಕಾರರು) ನಮಾಝ್ ನಿರ್ವಹಿಸುವ ವರೆಗೆ ಝಕಾತ್ ಅವರಿಗೆ ನೀಡುತ್ತಲಿರಿ."

ಬನೂ ಉಮಯ್ಯರ ಕಾಲದಲ್ಲಿ ಖಿಲಾಫತ್ ವ್ಯವಸ್ಥೆಯು ಬದಲಾಯಿತು. ಆಡಳಿತಾಧಿಕಾರಿಗಳು ಅಕ್ರಮ, ದೌರ್ಜನ್ಯವೆಸಗಲು ತೊಡಗಿದರು. ಆಗ ಕೆಲವರು, ಇಂತಹ ಜನರು ನಮ್ಮ ಝಕಾತ್‌ನ 'ಅಮೀರ್'ಗಳಾಗುವುದು ಹೇಗೆ ಎಂದು ಪ್ರಶ್ನಿಸಲಾರಂಭಿಸಿದರು. ಆ ಸಂದರ್ಭದಲ್ಲಿಯೂ ಝಕಾತ್ ಅವರ ಬಳಿಯೇ ಪಾವತಿಸಬೇಕೆಂದು ಸಹಾಬಿಗಳ ತೀರ್ಮಾನವಾಗಿತ್ತು. ವೈಯಕ್ತಿಕವಾಗಿ ಝಕಾತ್ ವ್ಯಯಿಸಿರೆಂದು ಯಾರೂ ಅಭಿಪ್ರಾಯ ಪಡಲಿಲ್ಲ.

ಇಬ್ನು ಅಬೀ ಶೈಬಾ(ರ) ವರದಿ ಮಾಡುತ್ತಾರೆ: ಹಝ್ರತ್ ಅಬ್ದುಲ್ಲಾ ಬಿನ್ ಉಮರ್(ರ)ರೊಂದಿಗೆ ಓರ್ವರು ಪ್ರಶ್ನಿಸುತ್ತಾರೆ. "ಈಗ ಝಕಾತ್ ಹೇಗೆ ನೀಡಬೇಕು? ಕಾಲದ ಆಡಳಿತಾಧಿಕಾರಿಗೋ? ಅವರಾದರೋ ಝಕಾತಿನ ಹಣವನ್ನು ತಮ್ಮ ಉಡುಗೆ, ಸುಗಂಧ ದ್ರವ್ಯಗಳಿಗೆ ಖರ್ಚು ಮಾಡುತ್ತಿದ್ದಾರೆ." ಆಗ ಇಬ್ನು ಉಮರ್(ರ) ಹೇಳಿದರು, "ಅವರು ಹಾಗೆ ಮಾಡುತ್ತಿದ್ದರೂ ಅವರ ಬಳಿಯೇ ಝಕಾತಿನ ಹಣ ಪಾವತಿಸಿರಿ."

ಝಕಾತ್‌ನ ವಿಷಯವು ಒಂದು ವ್ಯವಸ್ಥೆಯಿಲ್ಲದೆ ಸಂಸ್ಥಾಪನೆಯಾಗಲಾರದು.

## ಶರೀಅತ್ ವ್ಯವಸ್ಥೆಯಿಂದ ವಿಮುಖರಾಗಬಹುದಾದ ಬುನಾದಿಗಳು

ಇಸ್ಲಾಮಿನ ಆರಂಭ ಕಾಲದಿಂದ ಅಬ್ಬಾಸಿ ಆಡಳಿತದ ಕೊನೆಯ ವರೆಗೆ ಈ ವ್ಯವಸ್ಥೆ ತಪ್ಪದೇ ಜಾರಿಯಲ್ಲಿತ್ತು. ಆದರೆ ಹಿ.ಶ. 7ನೇ ಶತಮಾನದಲ್ಲಿ ತಾರ್ತಾರಿಗಳು ಇಸ್ಲಾಮೀ ಸಾಮ್ರಾಜ್ಯದ ಮೇಲೆ ಆಕ್ರಮಣವೆಸಗಿ ಖಿಲಾಫತ್ ವ್ಯವಸ್ಥೆಯನ್ನು ಅಳಿಸಿಬಿಟ್ಟಾಗ ಈಗೇನು ಮಾಡಬೇಕೆಂಬ ಪ್ರಶ್ನೆ ಉದ್ಭವಿಸಿತು. (ಇಂದು ಲಭ್ಯವಿರುವ

ಹನಫೀ ಕರ್ಮಶಾಸ್ತ್ರದ ವಿವರಣೆ ಮತ್ತು ಫತ್ವಾಗಳ ಪೈಕಿ ಹೆಚ್ಚಿನವು ಆ ಕಾಲದಲ್ಲಿ ಅಥವಾ ನಂತರ ಬರೆಯಲ್ಪಟ್ಟವುಗಳಾಗಿವೆ.) ಆಗ ಪ್ರಪ್ರಥಮವಾಗಿ ಝಕಾತನ್ನು ವೈಯಕ್ತಿಕವಾಗಿ ವ್ಯಯಿಸುವ ಕುರಿತು ಅಭಿಪ್ರಾಯ ಮಂಡಿಸಲಾಯಿತು. ಏಕೆಂದರೆ ಮುಸ್ಲಿಮೇತರ ಆಡಳಿತ ಇರುವ ವ್ಯವಸ್ಥೆಗೆ ಝಕಾತ್‌ನ ಹಣವನ್ನು ಪಾವತಿಸುವಂತಿಲ್ಲ. ಆ ಸಂದರ್ಭದಲ್ಲಿ ಕರ್ಮಶಾಸ್ತ್ರ ಪಂಡಿತರು ಇಸ್ಲಾಮೀ ಆಡಳಿತ ವ್ಯವಸ್ಥೆಗಳಿಲ್ಲದ ದೇಶಗಳಲ್ಲಿ ಹಾಗೂ ಶೀಘ್ರದಲ್ಲಿ ಅದು ಸ್ಥಾಪಿಸಲ್ಪಡುವ ಸಾಧ್ಯತೆಗಳಿಲ್ಲದ ಕಡೆಗಳಲ್ಲಿ ಇಸ್ಲಾಮೀ ವ್ಯವಸ್ಥೆ ಅಳಿದು ಹೋಗದಿರಲು, ಅಲ್ಲಿರುವ ಮುಸ್ಲಿಮರು ಯಾರಾದರೊಬ್ಬ ಸೂಕ್ತ ವ್ಯಕ್ತಿಯನ್ನು ತನ್ನ ನಾಯಕನಾಗಿ ನೇಮಿಸಬೇಕೆಂದು ಆಗ್ರಹಿಸಿದರು.

## ಮುಸ್ಲಿಮರ ನಿರ್ಲಕ್ಷ್ಯ

ಆದರೆ ವಿಷಾದದ ಸಂಗತಿಯೆಂದರೆ, ಮುಸ್ಲಿಮರು ಹಂತ ಹಂತವಾಗಿ ಝಕಾತ್‌ನ ವ್ಯವಸ್ಥೆಯ ಪ್ರಾಮುಖ್ಯತೆಯಿಂದಲೇ ಅಲಕ್ಷ್ಯರಾದರು. ಕ್ರಮೇಣ ಅದನ್ನು ಪಾವತಿಸುವ ವಿಷಯದಲ್ಲಿ ಸ್ವತಃ ಲೆಕ್ಕ ಮಾಡಿ ಖರ್ಚು ಮಾಡುವುದರ ಹೊರತಾಗಿ ಬೇರೆ ವಿಧಾನವಿಲ್ಲವೆಂದೇ ಭಾವಿಸಿದರು. ಆದರೆ ಕುರ್‌ಆನ್ ಆದೇಶಿಸಿರುವ ಝಕಾತ್ ಪಾವತಿಯ ವಿಧಾನ ಖಂಡಿತ ಇದಲ್ಲ. ತನ್ನ ಝಕಾತ್‌ನ ಹಣವನ್ನು ಬೈತುಲ್‌ಮಾಲ್‌ಗೆ ಪಾವತಿಸುವ ಬದಲು ವೈಯಕ್ತಿಕವಾಗಿ ವ್ಯಯಿಸುವ ಸಮೂಹವು ಶರೀಅತಿನ ಆಜ್ಞೆಯನ್ನು ಉಲ್ಲಂಘಿಸುತ್ತಿದ್ದು, ಅದು ಅಲ್ಲಾಹನ ಬಳಿ ವಿಚಾರಣಾರ್ಹವಾಗಿದೆ.

## ಅಮೀರರ ಆಯ್ಕೆ ಮತ್ತು ಬೈತುಲ್‌ಮಾಲ್ ಸ್ಥಾಪನೆ

ಭಾರತದಲ್ಲಿ ಇಸ್ಲಾಮೀ ಆಡಳಿತ ಅಸ್ತಿತ್ವದಲ್ಲಿಲ್ಲದ ಕಾರಣ ಮುಸ್ಲಿಮರು ವೈಯಕ್ತಿಕವಾಗಿ ಝಕಾತ್ ನೀಡಲು ನಿರ್ಬಂಧಿತರಾದರು ಎಂದು ನಾವು ಭಾವಿಸುತ್ತೇವೆ. ಈ ನೆಪವು ಶರೀಅತ್ ಮತ್ತು ಬೌದ್ಧಿಕ ದೃಷ್ಟಿಯಿಂದಲೂ ಸ್ವೀಕಾರಾರ್ಹವಲ್ಲ. ಜುಮಾ ನಮಾಝ್ ಸ್ಥಾಪನೆಗೂ ಇಮಾಮ್ ಅಥವಾ ಇಸ್ಲಾಮೀ ಆಡಳಿತಾಧಿಕಾರದ ಶರತ್ತುಗಳಿವೆ. ಹಾಗಿದ್ದರೂ ಭಾರತದಲ್ಲಿ ಜುಮಾ ನಿರ್ವಹಣೆಯ ವ್ಯವಸ್ಥೆಯನ್ನು ಕೈ ಬಿಡದ ಮುಸ್ಲಿಮ್ ಸಮುದಾಯವು ಝಕಾತ್ ವ್ಯವಸ್ಥೆಯನ್ನು ಯಾಕೆ ತ್ಯಜಿಸಬೇಕು? ಇಸ್ಲಾಮೀ ಜೀವನ ವ್ಯವಸ್ಥೆಯ ಸಂಸ್ಥಾಪನೆಗಾಗಿ ಸಮುದಾಯದ ಸರ್ವರಿಗೂ ಒಪ್ಪಿಗೆಯಾಗುವ ರೀತಿಯಲ್ಲಿ ಓರ್ವ ನಾಯಕನ ಆಯ್ಕೆ ಮಾಡಲು ಮತ್ತು ಕೇಂದ್ರೀಯ 'ಬೈತುಲ್‌ಮಾಲ್' ಸ್ಥಾಪಿಸಲು ನಮಗಿರುವ ತಡೆಯಾದರೂ ಏನು? ನಮ್ಮ ನಡುವೆ ಕೇವಲ ತಾರ್ಕಿಕ ವಿಷಯಗಳಿಗಾಗಿ ಅಗಣಿತ ಸಂಘ-ಸಂಸ್ಥೆಗಳು ಹುಟ್ಟಿಕೊಂಡಿರುವಾಗ ಇಸ್ಲಾಮ್ ನಿರ್ಬಂಧಿಸಿರುವ ವ್ಯವಸ್ಥೆಗಳ ಕಾರ್ಯರೂಪಕ್ಕೆ ಒಂದು ಸಂಸ್ಥೆಯನ್ನು ಸ್ಥಾಪಿಸುವುದರಿಂದ ಮುಸ್ಲಿಮರ ಕೈ ಕಟ್ಟಿದವರಾರು?

## ಮುಸ್ಲಿಮರಿಗೆ ನೈಜ ಸವಾಲು

ಇಸ್ಲಾಮ್ ಮಾನವನ ಸಾಮೂಹಿಕ ಜೀವನದ ಒಂದು ಪೂರ್ಣ ನಕಾಶೆಯನ್ನು ರಚಿಸಿದೆ. ಅದರ ಕೆಲವು ಭಾಗಗಳು ಕೆಟ್ಟರೆ, ಅದರ ಪೂರ್ಣ ರೂಪವೇ ಕೆಟ್ಟಿತೆಂದು ಅರ್ಥ. ಹಾಗೆಯೇ ಇಸ್ಲಾಮಿನ ಒಟ್ಟು ವ್ಯವಸ್ಥೆಯಲ್ಲಿ ಅದರ ಒಂದು ವಿಷಯದ ಮೇಲಿನ ನಿರ್ಲಕ್ಷ್ಯವು ಮುಸ್ಲಿಮರ ಸಾಮೂಹಿಕ ಜೀವನವನ್ನೇ ಬಾಧಿಸುತ್ತಿದೆ.

ಇಂದು ಜನರು ಸುಧಾರಣೆಗಾಗಿ ವಿವಿಧ ರೀತಿಯಲ್ಲಿ ಧ್ವನಿಯೆತ್ತುತ್ತಿದ್ದಾರೆ. ಸಂಘ ಸಂಸ್ಥೆಗಳು ಹಾಗೂ ಸಾರ್ವಜನಿಕ ದೇಣಿಗೆಗಳ ಮೂಲಕ ತಮ್ಮ ಸಮಸ್ಯೆಗಳಿಗೆ ಏನಾದರೂ ಪರಿಹಾರ ಕಂಡುಕೊಳ್ಳಬಹುದೆಂದು ಭಾವಿಸುತ್ತಾರೆ. ಆದರೆ ಇದಕ್ಕೆ ಯಾವುದೇ ಹೊಸ ಯೋಜನೆ ಕಂಡುಕೊಳ್ಳುವುದಲ್ಲ, ಬದಲಾಗಿ ತಾನು ಕಳೆದುಕೊಂಡ ವಿಧಾನವನ್ನು ಮರಳಿ ಹುಡುಕಿಕೊಳ್ಳುವುದೇ ಅವರ ಮುಂದಿರುವ ಸವಾಲಾಗಿದೆ.

## ಮಾರಕ ವಿಪತ್ತು

ಕೇವಲ ಶ್ರೀಮಂತರ ದೇಣಿಗೆಯಿಂದ ಮತ್ತು ಸಾಮುದಾಯಿಕ ಕಲ್ಯಾಣ ಸಂಘ–ಸಂಸ್ಥೆಗಳನ್ನು ಸ್ಥಾಪಿಸುವುದರಿಂದ ಸಮುದಾಯದ ಆರ್ಥಿಕ ಸಮಸ್ಯೆ ಬಗೆಹರಿಸಬಹುದಾಗಿದ್ದರೆ, ಇಂದು ಯುರೋಪ್ ಮತ್ತು ಅಮೇರಿಕಾಗಳಿಗಿಂತ ಮಿಗಿಲಾಗಿ ಈ ವ್ಯವಸ್ಥೆಯನ್ನು ಮಾಡಲು ಶಕ್ತರಾದವರು ಯಾರಿದ್ದಾರೆ? ಆದರೆ ಅವರ ಯಾವುದೇ ಸಾಮುದಾಯಿಕ ದತ್ತಿನಿಧಿ ಮತ್ತಿತರ ಯೋಜನೆಗಳಿಗೆ ಅಲ್ಲಿಯ ಹಿಂದುಳಿದ ಮತ್ತು ಮಧ್ಯಮ ವರ್ಗಗಳ ನಿರುದ್ಯೋಗ ಹಾಗೂ ಬಡತನವನ್ನು ನಿವಾರಿಸಲು ಸಾಧ್ಯವಾಗಲಿಲ್ಲ. ಈಗ ಅಲ್ಲಿಯ ಸಾಮೂಹಿಕ ಸಮಸ್ಯೆಗಳ ಮಾರಕ ವಿಪತ್ತು ಅವರ ತಲೆಯ ಮೇಲೆ ತೂಗುಗತ್ತಿಯಂತೆ ನೇತಾಡುತ್ತಿದೆ.

## ಆರ್ಥಿಕ ದುರವಸ್ಥೆಗಳ ಏಕೈಕ ಪರಿಹಾರ

ಜನರ ತಾತ್ಕಾಲಿಕ ಔದಾರ್ಯವು ಎಷ್ಟೇ ವಿಸ್ತಾರವಾಗಿದ್ದರೂ ಅದು ಸಮುದಾಯದ ಸಾಮೂಹಿಕ ಜೀವನ ಸೌಕರ್ಯದ ಸ್ಥಾಪನೆಗೆ ಸಾಕಾಗುವುದಿಲ್ಲ. ಈ ಪರಿಸ್ಥಿತಿಯ ಪರಿಹಾರಕ್ಕೆ 1400 ವರ್ಷಗಳ ಹಿಂದೆ ಇಸ್ಲಾಮ್ ಸೂಚಿಸಿದ ವಿಧಾನವೇ ಸೂಕ್ತವಾಗಿದೆ. ಅದೇನೆಂದರೆ ಕಾನೂನು ರಚಿಸುವುದರ ಮೂಲಕ ದೇಶದ ಒಟ್ಟು ಆದಾಯದ ಒಂದು ನಿರ್ದಿಷ್ಟ ಪಾಲನ್ನು ದುರ್ಬಲ ವರ್ಗದ ಬೇಡಿಕೆಗಳ ಈಡೇರಿಕೆಗೆ ಮೀಸಲಿರಿಸುವುದು. ಅಂದರೆ ಸಂಪತ್ತನ್ನು ಕೇವಲ ಶ್ರೀಮಂತರ ಕೈಯಲ್ಲಿ ಮಾತ್ರ ಶೇಖರವಾಗಲು ಬಿಡದೆ, ಸಮಾಜದ ಶ್ರೀಮಂತರಿಂದ ವಸೂಲಿ ಮಾಡಿ ಬಡ, ದುರ್ಬಲ ಜನರಲ್ಲಿ ಹಂಚುವುದು.



# ಝಕಾತ್ ಮತ್ತು ಅದರ ಸ್ವರೂಪ

## ಝಕಾತ್ ಮತ್ತು ಆದಾಯ ತೆರಿಗೆಯ ವ್ಯತ್ಯಾಸ

ಝಕಾತ್ ಎಂಬುದು ಸಾಮಾನ್ಯವಾಗಿ ನೀಡುವ ಭಿಕ್ಷೆಯಲ್ಲವೆಂದು ನಮಗೆ ತಿಳಿದಿರಬೇಕು. ಇದು ಪೂರ್ಣಾರ್ಥದಲ್ಲಿ ಇಸ್ಲಾಮೀ ಆಡಳಿತವು ಪ್ರತಿಯೋರ್ವ ವ್ಯಕ್ತಿಯ ಸಂಪಾದನೆಯ ಮೇಲೆ ಹೇರುವ ಆದಾಯ ತೆರಿಗೆಯಾಗಿದೆ. ಇದರ ಏಕಮಾತ್ರ ಶರ್ತವೇನೆಂದರೆ, ಒಬ್ಬನು ಸಂಪಾದಿಸುವ ಆದಾಯವು ಅವನ ಅಗತ್ಯಕ್ಕಿಂತ ಹೆಚ್ಚಾಗಿರಬೇಕು. ಪ್ರಸಕ್ತ ಕಾಲದ ಆದಾಯ ತೆರಿಗೆ ಮತ್ತು ಝಕಾತ್‌ನ ನಡುವೆ ಎರಡು ವ್ಯತ್ಯಾಸಗಳಿವೆ.

(1) ಇದು ತನ್ನ ಸ್ವರೂಪದಲ್ಲಿ ಹೆಚ್ಚು ವಿಶಾಲವಾದುದು. ಅಂದರೆ ಕೇವಲ ವ್ಯಾಪಾರದ ಆದಾಯದ ಏರಿಳಿತದ ಮೇಲೆ ಮಾತ್ರ ತೆರಿಗೆ ಹೇರಲಾಗುವುದಲ್ಲ, ಬದಲಾಗಿ ಉಳಿತಾಯದ ಮೇಲೂ ಅದು ಕಡ್ಡಾಯ ವಾಗುತ್ತದೆ; ಆ ವರ್ಷ ಯಾವುದೇ ಹೊಸ ಆದಾಯವಿಲ್ಲದಿದ್ದರೂ ಸರಿ. ಬೆಳೆಯುವ ಸಾಮರ್ಥ್ಯವುಳ್ಳ ಎಲ್ಲಾ ವಿಧದ ಒಡೆತನಗಳೂ ಇದರಲ್ಲಿ ಒಳಪಡುತ್ತವೆ. ಉದಾ: ಜಾನುವಾರು.

(2) ಉದ್ದೇಶದ ದೃಷ್ಟಿಯಿಂದ ಇದು ಒಂದು ವಿಶೇಷ ತಾತ್ಪರ್ಯವನ್ನು ಹೊಂದಿದೆ. ಅದಕ್ಕೆ ವಿವಿಧ ರೂಪಗಳನ್ನು ನಿರ್ಧರಿಸಲಾಗಿದೆ. ಆಡಳಿತ ವ್ಯವಸ್ಥೆಗೆ ಇವುಗಳ ಹೊರತು ಇತರ ವಿಭಾಗಗಳಲ್ಲಿ ಖರ್ಚು ಮಾಡುವ ಅಧಿಕಾರವಿಲ್ಲ.

## ಯಹೂದಿಯರೊಂದಿಗೆ ಹೋಲಿಕೆ

ಶರೀಅತ್‌ನ ಆದೇಶಗಳ ಪಾಲನೆಯಿಂದ ಪಾರಾಗಲು ಯಹೂದಿಯರು ಕಂಡು ಹುಡುಕಿದ್ದ ನೆಪಗಳನ್ನು ಮತ್ತು ಅವರ ಪಥಭ್ರಷ್ಟತೆಯನ್ನು ಪವಿತ್ರ ಕುರ್‌ಆನ್ ಪ್ರಸ್ತಾಪಿಸಿದೆ. ವಿಷಾದದ ಸಂಗತಿಯೇನೆಂದರೆ, ಮುಸ್ಲಿಮರಲ್ಲಿಯೂ ಇಂದು ಅದೇ ನಿಲುವು ಜನ್ಮ ತಾಳಿದೆ. ಇವುಗಳಲ್ಲಿ ಒಂದು ನೆಪವು ಝಕಾತ್‌ನ ಹೆಸರಲ್ಲೂ ಪ್ರಸಿದ್ಧವಾಗಿದೆ. ಝಕಾತ್‌ನಿಂದ ಪಾರಾಗಲು ಬಯಸುವವನು ತನ್ನ ಸಂಪತ್ತನ್ನು ಇನ್ನೋರ್ವನಿಗೆ ಉಡುಗೊರೆಯಾಗಿ ನೀಡಿ ಆನಂತರ ಹಿಂದೆ ಪಡೆಯುವ ಒಂದು

ಕೃತಕ ವ್ಯವಹಾರದ ವಿಧಾನಗಳನ್ನು ತೋರಿಸಿ ಕೊಡಲಾಗುತ್ತದೆ. ವರ್ಷ ಪೂರ್ತಿಯಾಗುವ ಮೊದಲು ತನ್ನೆಲ್ಲಾ ಸಂಪತ್ತನ್ನು ಇನ್ನೋರ್ವನಿಗೆ ಉಡುಗೊರೆಯಾಗಿ (ಹಿಬಾ) ಕೊಡುವುದು, ನಂತರ ವರ್ಷ ಪೂರ್ತಿಯಾಗುವ ಮೊದಲು ಅದೇ ಸಂಪತ್ತನ್ನು ನೀಡಿದವನಿಗೇ ಮರಳಿ ಹಿಬಾ ಮಾಡುವುದು. ಇದರ ಪರಿಣಾಮವಾಗಿ ಶ್ರೀಮಂತರಾಗಿದ್ದೂ ಇಬ್ಬರ ಮೇಲೂ ಝಕಾತ್ ಕಡ್ಡಾಯವಾಗುವ ಸಂದರ್ಭ ಬರುವುದಿಲ್ಲ. ಉದಾ: ಪತಿ ತನ್ನ ಪತ್ನಿಯೊಂದಿಗೆ ರಜಬ್ ತಿಂಗಳಲ್ಲಿ ನನ್ನ ಸಂಪತ್ತನ್ನು ನಿನಗೆ ಉಡುಗೊರೆಯಾಗಿ ನೀಡಿದೆಯೆಂದೂ, ಅವಳು ಸ್ವೀಕರಿಸಿದೆಯೆಂದೂ ಹೇಳುವುದು. ಸಂಪತ್ತಿನ ಒಡೆಯನಾಗಿರದ ಕಾರಣ ಪತಿಯ ಮೇಲೆ ಝಕಾತ್ ಕಡ್ಡಾಯವಾಗಲಿಲ್ಲ, ವರ್ಷ ಪೂರ್ತಿಯಾದರೆ ಅದು ಪತ್ನಿಗೆ ವರ್ಗಾಯಿಸಲ್ಪಡುತ್ತದೆ. ಆದರೆ ಅವಳು 12 ತಿಂಗಳು ಪೂರ್ತಿಗೊಳ್ಳಲು ಬಿಡದೆ ಜಮಾದಿಲ್ ಅವ್ವಲ್ ತಿಂಗಳಲ್ಲಿ ಪತಿಗೆ ಮರಳಿ ಉಡುಗೊರೆಯಾಗಿ ನೀಡಿದೆನೆಂದು ಹೇಳುವಳು. ಈ ರೀತಿಯಲ್ಲಿ ಅವಳ ಮೇಲೂ ಝಕಾತ್ ಕಡ್ಡಾಯವಾಗುವುದಿಲ್ಲ.

## ನೆಪವೊಡ್ಡುವುದು ಕರ್ಮಭ್ರಷ್ಟತೆಯ ಪರಾಕಾಷ್ಠೆಯಾಗಿದೆ

ದೇವಾದೇಶಗಳ ಪಾಲನೆಯಲ್ಲಿ ಈ ರೀತಿಯ ನೆಪ ಹುಡುಕುವುದು ಕರ್ಮಭ್ರಷ್ಟತೆಯ ಪರಾಕಾಷ್ಠೆಯಾಗಿದೆ. ಇಂತಹ ಕುತಂತ್ರಗಳನ್ನೆಸಗಿ ದೇವಾದೇಶ ಗಳಿಂದ ಪಾರಾಗಲು ಬಯಸುವವರ ಪಾಪವು ನೇರವಾಗಿ ಆ ಕರ್ಮವನ್ನು ತ್ಯಜಿಸುವವರಿಗಿಂತ ಹೆಚ್ಚಿನದು ಎಂಬುದನ್ನು ನೆನಪಿಡಬೇಕು. ಒಬ್ಬನಿಂದ ಅಪರಾಧ ವಾದರೆ ಅದು ಕೇವಲ ಅಪರಾಧ, ಆದರೆ ಅಪರಾಧವನ್ನು ಅಪರಾಧವಾಗದಂತೆ ಕೃತಕವಾಗಿ ಶುದ್ಧ ಕರ್ಮವನ್ನಾಗಿಸುವುದು ಸಾಮಾನ್ಯ ಅಪರಾಧವಲ್ಲ, ಅದು ಆ ಅಪರಾಧವನ್ನು ಮೀರಿಸುವಂತಹದ್ದಾಗಿದೆ. ಅದು ಅವನ ಪ್ರಾಯೋಗಿಕ ಜೀವನವನ್ನು ಮತ್ತು ವಿಶ್ವಾಸವನ್ನೂ ಕೆಡಿಸುವ ವಿಷಯವಾಗಿದೆ.

ಆದ್ದರಿಂದಲೇ ಸಮುದಾಯದಲ್ಲಿ ಇಂತಹ ನೆಪನಗಳ ಚರ್ಚೆ ವ್ಯಾಪಕವಾಗಲಾರಂಭಿಸಿದಾಗ, ನಮ್ಮ ಪೂರ್ವಜರು ಅದನ್ನು ಖಡಾಖಂಡಿತವಾಗಿ ವಿರೋಧಿಸಿದರು ಹಾಗೂ ಕರ್ಮಶಾಸ್ತ್ರ ಪಂಡಿತರು ಮತ್ತು ವಿದ್ವಾಂಸರ ಪೈಕಿ ಯಾರೂ ಕೂಡಾ ಈ ನೆಪವನ್ನು ಧರ್ಮ ಸಮ್ಮತಗೊಳಿಸಲಿಲ್ಲ.



# ಝಕಾತ್ ಮತ್ತು ದಾನಧರ್ಮಗಳ ನಡುವಿನ ವ್ಯತ್ಯಾಸ

## ಅಪೇಕ್ಷಿತ ಸಂಬಂಧಿಕರಿಗೆ ಸಹಾಯ

ನಮ್ಮಲ್ಲಿರುವ ಇನ್ನೊಂದು ತಪ್ಪು ಕಲ್ಪನೆಯೇನೆಂದರೆ ಬಡ ಸಂಬಂಧಿಕರಿಗೆ ಸಹಾಯ ಮಾಡಲು ಇರುವ ಏಕೈಕ ಮಾರ್ಗ ಅದು ಝಕಾತ್‌ನ ಮೊತ್ತವೆಂದು ಭಾವಿಸಿರುವುದಾಗಿದೆ.

ನಿಸ್ಸಂಶಯವಾಗಿಯೂ ಝಕಾತನ್ನು ಇತರರಿಗೆ ನೀಡುವ ಮೊದಲು ತಮ್ಮ ಸಂಬಂಧಿಕರ ವ್ಯಾಪ್ತಿಯಲ್ಲಿ ಬರುವ ಅಪೇಕ್ಷಿತರನ್ನು ಗುರುತಿಸಿಕೊಂಡು ಅವರನ್ನು ಆದ್ಯತೆಯಾಗಿ ಪರಿಗಣಿಸುವುದು ಪ್ರತಿಯೋರ್ವ ಮುಸ್ಲಿಮನ ಕರ್ತವ್ಯವಾಗಿದೆ. ಕುರ್‌ಆನ್ ದಾನಧರ್ಮಗಳ ವಿಷಯದಲ್ಲಿ ಕೈಗೊಂಡಿರುವ ಒಟ್ಟು ಸುಧಾರಣಾ ಕ್ರಮಗಳಲ್ಲಿ ಅತೀ ದೊಡ್ಡ ಸುಧಾರಣೆಯೆಂದರೆ ತನ್ನ ಸಂಬಂಧಿಕರಿಗೆ ಸಹಾಯ ಮಾಡುವುದಾಗಿದೆ. ಅದು ಎಲ್ಲಕ್ಕಿಂತ ಪ್ರಥಮ ಮಾತ್ರವಲ್ಲ, ಉತ್ತಮ ಖರ್ಚು ಎನ್ನಲಾಗಿದೆ.

يَسْـَٔلُوْنَكَ مَاذَا يُنْفِقُوْنَ ۗ قُلْ مَآ اَنْفَقْتُمْ مِّنْ خَيْرٍ فَلِلْوَالِدَيْنِ وَالْاَقْرَبِيْنَ

"ಓ ಪೈಗಂಬರರೇ, ಜನರು ನಿಮ್ಮೊಂದಿಗೆ ನಾವೇನನ್ನು ಖರ್ಚು ಮಾಡಬೇಕು ಎಂದು ಕೇಳುತ್ತಾರೆ. ನೀವು ಏನು ಖರ್ಚು ಮಾಡುತ್ತೀರೋ ಅದನ್ನು ನಿಮ್ಮ ಮಾತಾಪಿತರ ಮತ್ತು ಸಂಬಂಧಿಕರ ಮೇಲೆ ಖರ್ಚು ಮಾಡಿರೆಂದು ಹೇಳಿರಿ."
**(ಪವಿತ್ರ ಕುರ್‌ಆನ್ 2: 215)**

## ಕುಟುಂಬ ಸಂಬಂಧ ಸ್ಥಾಪನೆಯ ಹಕ್ಕು

ದಾನಧರ್ಮಗಳ ಪೈಕಿ ಒಂದು ವಿಶಿಷ್ಟ ರೂಪವಾಗಿರುವ ಝಕಾತನ್ನು ಕಡ್ಡಾಯಗೊಳಿಸಿರುವುದರ ಅರ್ಥ, ಜನರು ದಾನಧರ್ಮಗಳ ಇತರ ವಿಧಾನ ಗಳಿಂದ ತಮ್ಮನ್ನು ತಡೆದಿರಿಸಬೇಕೆಂಬುದಾಗಲಿ ಅಥವಾ ತನ್ನ ಅಪೇಕ್ಷಿತ ಸಂಬಂಧಿಕರ ಸಹಾಯದ ಹೊರೆಯನ್ನೂ ಅದರ ಮೇಲೆಯೇ ಹಾಕಬೇಕೆಂದಾಗಲಿ ಅಲ್ಲ. ಸ್ಥಿತಿವಂತನಾಗಿರುವವನೇ ಝಕಾತ್ ನೀಡಬೇಕಾದುದಾಗಿದೆ. ಓರ್ವನು ಸ್ಥಿತಿವಂತನಾಗಿದ್ದು

ಅವನ ಸಂಬಂಧಿಕರಲ್ಲಿ ಅಪೇಕ್ಷಿತರು ಮತ್ತು ಬಡವರು ಇದ್ದರೆ, ಅವರ ಸಹಾಯ ಮಾಡುವುದು ಓರ್ವ ಮುಸ್ಲಿಮನ ಪ್ರಥಮ ಕರ್ತವ್ಯವಾಗಿದೆ. ಸಹಾಯ ಮಾಡದಿದ್ದರೆ ಅಲ್ಲಾಹನ ಬಳಿ ಖಂಡಿತವಾಗಿಯೂ ಅವನು ವಿಚಾರಣಾರ್ಹನು ಯಾಕೆಂದರೆ ಸಂಬಂಧ ನಿರ್ವಹಣೆಯ ಹಕ್ಕು ಅಲ್ಲಾಹನಿಂದ ನಿರ್ಧರಿತವಾದುದು.

وَاتَّقُوا اللّٰهَ الَّذِي تَسَاءَلُونَ بِهِ وَالْأَرْحَامَ

"ನೀವು ಯಾರ ಹೆಸರನ್ನೆತ್ತಿ ಪರಸ್ಪರ ಹಕ್ಕು ಬಾಧ್ಯತೆಗಳನ್ನು ಕೇಳುತ್ತೀರೋ ಆ ಅಲ್ಲಾಹನನ್ನು ಭಯಪಡಿರಿ. ಕುಟುಂಬ ಸಂಬಂಧಗಳನ್ನು ಕೆಡಿಸಬೇಡಿರಿ."

(ಪವಿತ್ರ ಕುರ್‌ಆನ್: 4: 1)

ನಿಸ್ಸಂಶಯವಾಗಿಯೂ ಅವನ ಈ ಸಹಾಯವು ದಾನಧರ್ಮದ ಅತ್ಯುತ್ತಮ ವಿಧಾನವಾಗಿರುವುದು. ಆದರೆ ಎಲ್ಲ ಪರಿಸ್ಥಿತಿಯಲ್ಲಿಯೂ ಅದು ಅವನ ಇಸ್ಲಾಮೀ ಕರ್ತವ್ಯವಾಗಿರುತ್ತದೆ. ಸ್ಥಿತಿವಂತನಾದವನು ಸಂಬಂಧಿಕರ ಬಡತನವನ್ನು ನಿರ್ಲಕ್ಷಿಸುವುದು, ಹಸಿವಿನಲ್ಲಿ ಬಿಟ್ಟು ಬಿಡುವುದು ಮತ್ತು ಏನಾದರೂ ಕೊಟ್ಟರೆ ಅದನ್ನು ಝಕಾತ್‌ನ ಭಾಗವೆಂದು ಪರಿಗಣಿಸುವುದು ಇದಾವುದೂ ಯಾವ ಸನ್ನಿವೇಶದಲ್ಲಿಯೂ ಶರೀಅತ್ ಪ್ರಕಾರವೆನ್ನಲಾಗದು.

## ಮುಸ್ಲಿಮರ ಅನಿಸ್ಲಾಮಿಕ ಜೀವನ

ಮುಸ್ಲಿಮರು ಕೆಲವು ನಿರ್ದಿಷ್ಟ ಇಸ್ಲಾಮೀ ಕಾರ್ಯಗಳನ್ನು ಮಾತ್ರ ತ್ಯಜಿಸಿರುವುದಲ್ಲ ಬದಲಾಗಿ ಅವರ ಪೂರ್ಣ ಜೀವನ ಅನಿಸ್ಲಾಮಿಕವಾಗಿದೆ. ಅವರ ವೈಚಾರಿಕ ಸ್ಥಿತಿ, ಅವರ ಕಾರ್ಯದ ಗತಿ, ಧಾರ್ಮಿಕ ದೃಷ್ಟಿಕೋನಗಳೆಲ್ಲವೂ ಅನಿಸ್ಲಾಮಿಕ ರೂಪದಲ್ಲಿದೆ. ಅವರು ಇಸ್ಲಾಮಿನ ಆದೇಶಗಳ ಪಾಲನೆ ಮಾಡಲು ಬಯಸುವುದಾದರೂ ಅದು ಅನಿಸ್ಲಾಮಿಕ ರೀತಿಯಲ್ಲಿ ಮಾಡುತ್ತಾರೆ. ಇದು ಧಾರ್ಮಿಕ ಅವನತಿಯ ಪರಾಕಾಷ್ಠೆಯಾಗಿದೆ.

فَمَالِ هٰؤُلَاءِ الْقَوْمِ لَا يَكَادُونَ يَفْقَهُونَ حَدِيثًا

"ಇವರಿಗೆ ಏನಾಗಿ ಬಿಟ್ಟಿದೆ? ಇವರಿಗೆ ಯಾವ ವಿಷಯವೂ ತಿಳಿಯುವುದಿಲ್ಲವಲ್ಲ?"

(ಪವಿತ್ರ ಕುರ್‌ಆನ್: 4: 78)



# ದೇವಮಾರ್ಗದ ಖರ್ಚು ಮತ್ತು ಝಕಾತ್

## ಇಸ್ಲಾಮೀ ಜೀವನದ ಸಾರ

ಝಕಾತ್ ನೀಡುವುದರೊಂದಿಗೆ ತನ್ನ ಪಾಲಿನ ದೇವಮಾರ್ಗದ ಖರ್ಚು ಮತ್ತು ದಾನಧರ್ಮಗಳ ಕರ್ತವ್ಯಗಳು ಕೊನೆಗೊಂಡವು ಎಂದು ಕೆಲವರು ಭಾವಿಸಿದ್ದಾರೆ. ಅಂತೆಯೇ ರಮಝಾನಿನಲ್ಲಿ ಕೆಲವು ನಾಣ್ಯ ಅಥವಾ ರೂಪಾಯಿ ಗಳನ್ನು ವಿತರಿಸಿದರೆ, ವರ್ಷವಿಡೀ ಎಲ್ಲಾ ರೀತಿಯ ಇಸ್ಲಾಮಿನ ಮಾನವೀಯ ಬೇಡಿಕೆಗಳಿಂದ ಮುಕ್ತರಾಗಿ ಬಿಡುವೆವು ಎಂದು ನಿರ್ಧರಿಸಿ ಬಿಟ್ಟಿದ್ದಾರೆ. ಇವೆಲ್ಲವೂ ಸಮುದಾಯದಲ್ಲಿ ಹಬ್ಬಿರುವ ಮಾರಕ ತಪ್ಪು ಕಲ್ಪನೆಯಾಗಿದೆ.

ಮುಸ್ಲಿಮರಲ್ಲಿರುವ ಈ ರೀತಿಯ ಆಲೋಚನೆಯು ಇಸ್ಲಾಮನ್ನು ಸಾರಾ ಸಗಟಾಗಿ ಮರೆತುಬಿಡುವಂತಿದೆ. ಇಸ್ಲಾಮ್ ಮುಸ್ಲಿಮರಿಗೆ ಸೂಚಿಸುವ ಜೀವನ ವಿಧಾನವೇನೆಂದರೆ ಅದು ಕೇವಲ ತಾನು ಮತ್ತು ತನ್ನ ಪತ್ನಿ ಮಕ್ಕಳ ಪಾಲನೆ ಮಾಡಲು ಆದೇಶಿಸಿರುವುದಲ್ಲ, ಬದಲಾಗಿ ತನ್ನ ಮನೆ ಮಂದಿ ಸೇರಿದಂತೆ ಕುಟುಂಬ ಮತ್ತು ಸಮಾಜದ ಮಾನವೀಯ ಕರ್ತವ್ಯಗಳನ್ನು ನಿರ್ವಹಿಸುವ ಒಂದು ಸಂಪೂರ್ಣ ಪರೀಕ್ಷಾ ವ್ಯವಸ್ಥೆಯಾಗಿದೆ. ಎಷ್ಟರ ವರೆಗೆ ಓರ್ವನು ಈ ಪರೀಕ್ಷೆಗಳಲ್ಲಿ ಸಫಲನಾಗುವುದಿಲ್ಲವೋ ಅಲ್ಲಿಯ ವರೆಗೆ ಇಸ್ಲಾಮೀ ಜೀವನದ ರುಚಿಯಿಂದ ಆತ ವಂಚಿತನಾಗಿರುತ್ತಾನೆ.

ಒಬ್ಬನ ಮೇಲೆ ತನ್ನ ದೇಹದ ಹಕ್ಕು ಇದೆ, ಅವನ ಮಾತಾಪಿತರ ಹಕ್ಕು ಇದೆ, ಸಂಬಂಧಿಕರ, ಪತ್ನಿ ಮಕ್ಕಳ, ನೆರೆಹೊರೆಯವರ ಮತ್ತು ಸರ್ವ ಮಾನವ ಕುಲದ ಹಕ್ಕುಗಳಿವೆ. ತನ್ನ ಶಕ್ತಿ ಸಾಮರ್ಥ್ಯಾನುಸಾರ ಈ ಎಲ್ಲಾ ಹಕ್ಕುಗಳನ್ನು ತೀರಿಸುವುದು ಅವನ ಮೇಲೆ ಕಡ್ಡಾಯವಾಗಿದೆ. ಆತನ ಇಹ ಪರಗಳ ಯಶಸ್ಸು ಈ ಕರ್ತವ್ಯ ನಿರ್ವಹಣೆಯನ್ನೇ ಅವಲಂಬಿಸಿದೆ.

وَاعْبُدُوا اللّٰهَ وَلَا تُشْرِكُوْا بِهٖ شَيْـًٔا وَّ بِالْوَالِدَيْنِ اِحْسَانًا وَّبِذِی الْقُرْبٰى

وَالْيَتٰمٰى وَالْمَسٰكِيْنِ وَالْجَارِ ذِى الْقُرْبٰى وَالْجَارِ الْجُنُبِ وَالصَّاحِبِ
بِالْجَنْۢبِ وَابْنِ السَّبِيْلِ ۙ وَمَا مَلَكَتْ اَيْمَانُكُمْ ؕ

"ನೀವೆಲ್ಲರೂ ಅಲ್ಲಾಹನ ದಾಸ್ಯ–ಆರಾಧನೆ ಮಾಡಿರಿ, ಅವನೊಂದಿಗೆ ಯಾರನ್ನೂ ಸಹಭಾಗಿಯನ್ನಾಗಿ ಮಾಡಬೇಡಿರಿ. ಮಾತಾಪಿತರೊಂದಿಗೆ ಸೌಜನ್ಯ ದಿಂದ ವರ್ತಿಸಿರಿ. ಸಂಬಂಧಿಕರೊಂದಿಗೂ ಅನಾಥರೊಂದಿಗೂ ನಿರ್ಗತಿಕ ರೊಂದಿಗೂ ಆಪ್ತರಾದ ನೆರೆ ಹೊರೆಯವರೊಂದಿಗೂ ಅಪರಿಚಿತ ನೆರೆಹೊರೆಯವ ರೊಂದಿಗೂ ಅನುಚರರೊಂದಿಗೂ ಪ್ರಯಾಣಿಕರೊಂದಿಗೂ ನಿಮ್ಮ ಅಧೀನದಲ್ಲಿರುವ ದಾಸ ದಾಸಿಯರೊಂದಿಗೂ ಉತ್ತಮ ರೀತಿಯಿಂದ ವರ್ತಿಸಿರಿ." (ಪವಿತ್ರ ಕುರ್‌ಆನ್ 4:36)

ದಾನ ಧರ್ಮಗಳಿಗಾಗಿ ಮಾನವನು ತನ್ನ ಕೈಯನ್ನು ತೆರೆದುಕೊಳ್ಳದೆ ಈ ಎಲ್ಲಾ ಕರ್ತವ್ಯಗಳನ್ನು ನಿರ್ವಹಿಸಲು ಸಾಧ್ಯವಿಲ್ಲ.

## ಕಪಟ ವಿಶ್ವಾಸಿಯ ಗುರುತು

ಆದ್ದರಿಂದಲೇ ಕುರ್‌ಆನ್ ಕರ್ಮಗಳ ಪೈಕಿ ನಮಾಝ್ ಮತ್ತು ಅಲ್ಲಾಹನ ಮಾರ್ಗದಲ್ಲಿ ಮಾಡುವ ಖರ್ಚುಗಳ ಬಗ್ಗೆ ನೀಡಿದಷ್ಟು ಒತ್ತು ಬೇರಾವ ಕರ್ಮಗಳಿಗೂ ನೀಡಲಿಲ್ಲ; ಅದೇ ರೀತಿ ಮುಷ್ಠಿ ಮುಚ್ಚಿಕೊಂಡಿರುವುದು ಕಪಟ ವಿಶ್ವಾಸಿಗಳ ಅತೀ ದೊಡ್ಡ ಲಕ್ಷಣವಾಗಿದೆ ಅದು ಎಂದು ತಿಳಿಸಿತು.

وَيَقْبِضُوْنَ اَيْدِيَهُمْ ؕ

."ಮತ್ತು ತಮ್ಮ ಕೈಗಳನ್ನು ಸತ್ಕಾರ್ಯಗಳಿಂದ ತಡೆದಿಡುತ್ತಾರೆ."

(ಪವಿತ್ರ ಕುರ್‌ಆನ್ 9: 67)

وَلَا يُنْفِقُوْنَ اِلَّا وَهُمْ كٰرِهُوْنَ

"ಅವರು ದೇವ ಮಾರ್ಗದಲ್ಲಿ ಒಲ್ಲದ ಮನಸ್ಸಿನಿಂದ ಖರ್ಚು ಮಾಡುತ್ತಾರೆ."

(ಪವಿತ್ರ ಕುರ್‌ಆನ್ 9: 54)

## ಸತ್ಯವಿಶ್ವಾಸಿಯ ಗುರುತು

اَلَّذِيْنَ يُنْفِقُوْنَ اَمْوَالَهُمْ بِالَّيْلِ وَالنَّهَارِ سِرًّا وَّعَلَانِيَةً

"ತಮ್ಮ ಸಂಪತ್ತನ್ನು ಅಹೋರಾತ್ರಿ ರಹಸ್ಯವಾಗಿಯೂ ಬಹಿರಂಗವಾಗಿಯೂ ಖರ್ಚು ಮಾಡುವವರು. (ಪವಿತ್ರ ಕುರ್‌ಆನ್ 2: 274)

ಯಾರ ಕೈಗಳು ಸದಾ ತೆರೆದಿರುವುದೋ ಅವರೇ ಸತ್ಯ ವಿಶ್ವಾಸಿಗಳು. ಅವರು ಅಹೋರಾತ್ರಿ ರಹಸ್ಯವಾಗಿಯೂ ಬಹಿರಂಗವಾಗಿಯೂ ಎಲ್ಲಾ ಪರಿಸ್ಥಿತಿಯಲ್ಲಿಯೂ ಅಲ್ಲಾಹನ ಮಾರ್ಗದಲ್ಲಿ ಖರ್ಚು ಮಾಡುತ್ತಿರುವರು.

## ಪೈಶಾಚಿಕ ಚಿಂತನೆ

ಇನ್ನೂ ಮುಂದುವರಿದು ಹೇಳಲಾಯಿತು – ಅಪೇಕ್ಷಿತರ ಬೇಡಿಕೆಗಳಿಗೆ ಖರ್ಚು ಮಾಡುವುದರಿಂದ ನಾವು ಕೂಡ ಕೊನೆಗೆ ಸ್ವತಃ ಅಪೇಕ್ಷಿತರಾಗುವ ಪರಿಸ್ಥಿತಿಗೆ ಬಹುದೆಂದು ಭಾವಿಸುವುದು ಪೈಶಾಚಿಕ ಚಿಂತನೆಯಾಗಿದೆ. ಈ ಮಾರ್ಗದಲ್ಲಿ ಜಿಪುಣತೆ ತೋರುವುದು ಅತೀ ದೊಡ್ಡ ಕೆಡುಕಾಗಿದೆ. ಅಲ್ಲಾಹನು ಅವನ ಮಾರ್ಗದಲ್ಲಿ ವ್ಯಯಿಸುವ ಆದೇಶ ಕೊಡುವ ಮೂಲಕ ನಿಮ್ಮನ್ನು ಕ್ಷಮೆ ಮತ್ತು ಸುಖದಾಯಕ ಮಾರ್ಗದಲ್ಲಿ ಕೊಂಡೊಯ್ಯುತ್ತಾನೆ.

اَلشَّيْطٰنُ يَعِدُكُمُ الْفَقْرَ وَيَاْمُرُكُمْ بِالْفَحْشَاۤءِ ۚ وَاللّٰهُ يَعِدُكُمْ مَّغْفِرَةً مِّنْهُ وَفَضْلًا

"ಶೈತಾನನು ನಿಮ್ಮನ್ನು ದಾರಿದ್ರ್ಯದಿಂದ ಭಯಭೀತಗೊಳಿಸುತ್ತಾನೆ ಮತ್ತು ಅಶ್ಲೀಲ ಕಾರ್ಯಗಳನ್ನೆಸಗುವ ಪ್ರಚೋದನೆಯನ್ನೀಯುತ್ತಾನೆ. ಆದರೆ ಅಲ್ಲಾಹನು ನಿಮಗೆ ತನ್ನ ಕ್ಷಮೆ ಹಾಗೂ ಅನುಗ್ರಹದ ವಚನವನ್ನೀಯುತ್ತಾನೆ."

(ಪವಿತ್ರ ಕುರ್‌ಆನ್ 2: 268)

## ಕುರ್‌ಆನಿನ ಶಿಕ್ಷಣದಿಂದ ವಿಮುಖತೆ

ವರ್ಷಕ್ಕೊಮ್ಮೆ 'ಝಕಾತ್' ಪಾವತಿಸಿ ಅಲ್ಲಾಹನ ಮಾರ್ಗದ ಖರ್ಚಿನ ಎಲ್ಲಾ ಬೇಡಿಕೆಗಳು ಈಡೇರಿಸಿದೆವು ಎಂದು ಭಾವಿಸುವುದು ಕುರ್‌ಆನಿನ ಶಿಕ್ಷಣಗಳಿಂದ ವಿಮುಖರಾದಂತೆಯೇ ಸರಿ. 'ಝಕಾತ್' ಒಂದು ವಿಶಿಷ್ಟ ರೂಪದ ತೆರಿಗೆ, ಅದನ್ನು ಒಂದು ವಿಶೇಷ ಉದ್ದೇಶಕ್ಕಾಗಿ ವಿಧಿಸಲಾಗಿದ್ದು ಅದು ವರ್ಷಕ್ಕೊಮ್ಮೆ ಪಾವತಿಸಲ್ಪಡಬೇಕು. ಈ ಉದ್ದೇಶವು ನಮ್ಮ ಜೀವನದ ಪ್ರತೀ ತಾಸೂ ನಮ್ಮಿಂದ ದೇವ ಮಾರ್ಗದಲ್ಲಿ ವ್ಯಯಿಸುವ ಬೇಡಿಕೆಯನ್ನಿಡುತ್ತವೆ, ನಾವು ಇಸ್ಲಾಮೀ ಜೀವನದ ಬುತ್ತಿಯೊಂದಿಗೆ ಈ ಲೋಕದಿಂದ ನಿರ್ಗಮಿಸಲು ಬಯಸುವವರಾದರೆ ನಮ್ಮ ಸಾಮರ್ಥ್ಯಾನುಸಾರ ಎಲ್ಲಾ ಬೇಡಿಕೆಗಳನ್ನು ಪೂರೈಸುವುದು ನಮ್ಮ ಕರ್ತವ್ಯವಾಗಿದೆ.



# ಕುರ್‌ಆನ್ ಮತ್ತು ಸಮಾಜವಾದ

## ಬಂಡವಾಳಶಾಹಿತ್ವದ ಕೆಡುಕುಗಳು ಮತ್ತು ಸಂಪತ್ತಿನ ವಿತರಣೆ

ಲೋಕದಲ್ಲಿ ಸಂಪತ್ತು ಮತ್ತು ಆರ್ಥಿಕ ಸಂಪನ್ಮೂಲಗಳ ಕೇಂದ್ರೀಕರಣ ಯಾವ ಮಟ್ಟಕ್ಕೆ ತಲುಪಿತ್ತೆಂದರೆ ಅದಕ್ಕೆ ಪ್ರತಿರೋಧ ಉಂಟಾಗುವುದು ಸ್ವಾಭಾವಿಕ ವಾಗಿತ್ತು. ಆದ್ದರಿಂದಲೇ 18ನೇ ಶತಮಾನದಲ್ಲಿ ಇದು ಸಮಾಜವಾದದ ಬುನಾದಿಗೆ ಕಾರಣವಾಯಿತು. ನಂತರ ಅದು ವಿಪರೀತ ಹಂತವಾದ ಕಮ್ಯೂನಿಸಂನ ರೂಪ ತಾಳಿತು. ಕುರ್‌ಆನಿನ ಶಿಕ್ಷಣವು ಬಂಡವಾಳಶಾಹಿತ್ವದ ಕೆಡುಕುಗಳನ್ನು ಅಳಿಸುವುದು ಮತ್ತು ಸಂಪತ್ತಿನ ವಿತರಣೆಯ ಪರವಾಗಿರುವುದರಿಂದ ಅದು ಕೂಡ ಸಮಾಜವಾದದ ಕಡೆಗೆ ಸಾಗುತ್ತಿಯೇ ಎಂಬ ಪ್ರಶ್ನೆ ಸ್ವಾಭಾವಿಕವಾಗಿ ಏಳುತ್ತದೆ. ಆದರೆ ಒಂದು ಹಂತದ ವರೆಗೆ ಹಾಗೆ ತಿಳಿಯಬಹುದಾದರೂ ನಾವು ಅದರ ನೈಜ ವಾಸ್ತವಿಕತೆಯನ್ನು ಅರಿಯಬೇಕಾಗಿದೆ.

ಇಲ್ಲಿ ಎರಡು ಪರಿಸ್ಥಿತಿಗಳಿವೆ, ಅವೆರಡರ ಮಧ್ಯೆ ಇರುವ ವ್ಯತ್ಯಾಸವನ್ನು ಗಮನಿಸಬೇಕಾದ ಅಗತ್ಯವಿದೆ.

## ವೈಯಕ್ತಿಕ ಒಡೆತನದ ಹಕ್ಕಿನ ಅಂಗೀಕಾರ

ಒಂದನೆಯ ಪರಿಸ್ಥಿತಿಯೇನೆಂದರೆ, ಸಂಪತ್ತು ಮತ್ತು ಸಂಪನ್ಮೂಲಗಳ ಕೇಂದ್ರೀಕರಣವನ್ನು ತಡೆಯುವುದು. ಸಂಪಾದಿಸುವ ಪ್ರತಿಯೋರ್ವನು ತನ್ನ ಆದಾಯದ ಒಂದು ಭಾಗವನ್ನು ದುರ್ಬಲ ಜನರಿಗಾಗಿ ತೆಗೆದಿರಿಸುವಂತೆ ಕಾನೂನಿನ ಮೂಲಕ ನಿರ್ಬಂಧಪಡಿಸುವುದು ಹಾಗೂ ಯಾವುದೇ ವ್ಯಕ್ತಿ ತನ್ನ ಜೀವನದ ಅಗತ್ಯಗಳಿಂದ ವಂಚಿತನಾಗದಂತೆ ಸರಕಾರವನ್ನು ಹೊಣೆಯಾಗಿಸು ವುದು. ಆರ್ಥಿಕವಾಗಿ ಎಲ್ಲಾ ಜನರ ಮತ್ತು ವರ್ಗಗಳ ಪರಿಸ್ಥಿತಿ ಸಮಾನವಾಗಿರಲು ಸಾಧ್ಯವಿಲ್ಲ; ಈ ಅಸಮಾನತೆ ಹೆಚ್ಚಿನ ಸ್ಥಿತಿಗಳಲ್ಲಿ ನೈಸರ್ಗಿಕವಾದುದು ಎಂಬ ವಾಸ್ತವಿಕತೆಯನ್ನು ಸ್ವೀಕರಿಸುವುದು. ಏಕೆಂದರೆ ಎಲ್ಲರ ದೈಹಿಕ, ಬೌದ್ಧಿಕ ಸಾಮರ್ಥ್ಯಗಳು ಸಮಾನವಾಗಿಲ್ಲದಿರುವಾಗ ಆರ್ಥಿಕತೆಗಾಗಿ ಪರಿಶ್ರಮದ ಪ್ರತಿಫಲವೂ ಸಮಾನವಾಗಿರಲು

ಸಾಧ್ಯವಿಲ್ಲ. ಬೇರೊಂದು ಮಾತಿನಲ್ಲಿ ಹೇಳುವು ದಾದರೆ ವೈಯಕ್ತಿಕ ಮಾಲಕತ್ವದ ಹಕ್ಕನ್ನು ಅಂಗೀಕರಿಸುವುದು. ಅಂದರೆ ಯಾರು ಎಷ್ಟನ್ನು ಗಳಿಸುವನೋ ಅದು ಅವನದ್ದು.

## ವೈಯಕ್ತಿಕ ಒಡೆತನವಿಲ್ಲದಿರುವುದು

ಎರಡನೆಯ ಪರಿಸ್ಥಿತಿಯೇನೆಂದರೆ, ಸಂಪತ್ತಿನ ಕೇಂದ್ರೀಕರಣವನ್ನು (ಶೇಖರಣೆಯನ್ನು) ಮಾತ್ರ ತಡೆಯುವುದಲ್ಲ, ಬದಲಾಗಿ ಅದರ ವೈಯಕ್ತಿಕ ಒಡೆತನವನ್ನೇ ಕೊನೆಗೊಳಿಸುವುದು; ಬಲವಂತದ ಕಾನೂನುಗಳ ಮೂಲಕ ಆರ್ಥಿಕ ಸಮಾನತೆಯ ಪರಿಸ್ಥಿತಿ ನಿರ್ಮಿಸುವ ವ್ಯವಸ್ಥೆಯನ್ನು ಸ್ಥಾಪಿಸುವುದು. ಉದಾ: ಆರ್ಥಿಕ ಸಂಪನ್ಮೂಲಗಳೆಲ್ಲವೂ ಪೂರ್ಣವಾಗಿ ರಾಷ್ಟ್ರೀಯ ಒಡೆತನಕ್ಕೆ ಸಲ್ಲುವುದು, ವೈಯಕ್ತಿಕ ಮಾಲಕತ್ವ ಉಳಿಯದಿರುವುದು ಹಾಗೂ ದೈಹಿಕ ಮತ್ತು ಬೌದ್ಧಿಕ ಕ್ಷಮತೆಯ ಭಿನ್ನತೆಗಳ ಕಾರಣ ಆರ್ಥಿಕತೆಯೂ ಭಿನ್ನವಾಗಿರು ವುದನ್ನು ಮೂಲತಃ ವಾಸ್ತವಿಕವೆಂದು ಅಂಗೀಕರಿಸದಿರುವುದು.

## ಕುರ್‌ಆನಿನ ವಿಧಾನ

ಕುರ್‌ಆನ್ ಇದರ ಪ್ರಥಮ ಸ್ಥಿತಿಯನ್ನು ಸ್ವೀಕರಿಸಿದ್ದು, ಎರಡನೇ ಸ್ಥಿತಿಗಾಗಿ ಸಮಾಜವಾದವು ಶ್ರಮಿಸುತ್ತಿದೆ. ಎರಡರ ಉದ್ದೇಶವೂ ಬಹುಸಂಖ್ಯಾತ ಮಾನವರ ಸಂಕಷ್ಟ ದೂರವಾಗಬೇಕೆಂಬುದೇ ಆಗಿದೆ. ಇಸ್ಲಾಮ್ ಮತ್ತು ಸಮಾಜವಾದದ ನಿಲುವುಗಳು ಸಂಪತ್ತಿನ ಶೇಖರಣೆ ತಡೆಯಲ್ಪಡಬೇಕು ಎಂಬುದಕ್ಕೆ ಒಂದೇ ಪರಿಹಾರವನ್ನು ಸೂಚಿಸಿವೆ. ಆದರೆ ಎರಡರ ವಿಧಾನ ಒಂದಲ್ಲ. ಒಂದು ಆರ್ಥಿಕ ಅಸಮಾನತೆಯನ್ನು ವಿರೋಧಿಸದೆ ಅದನ್ನು ಉಳಿಸಿಕೊಂಡೇ ಪರಿಹಾರ ಸೂಚಿಸಿದರೆ ಇನ್ನೊಂದು ಅದನ್ನು ಅಳಿಸಬಯಸುತ್ತದೆ.

## ಇಸ್ಲಾಮ್ ಮತ್ತು ಸಮಾಜವಾದ

ಇಸ್ಲಾಮ್ ಮತ್ತು ಸಮಾಜವಾದ ಸಿದ್ಧಾಂತಗಳ ಈ ಭಿನ್ನತೆ ಮೇಲ್ನೋಟಕ್ಕೆ ಕೇವಲ ಶ್ರೇಣಿಯ ಭಿನ್ನತೆಯೆಂದು ಕಂಡು ಬರುತ್ತದೆ. ಆದರೆ ಇದರ ತಳಮಟ್ಟ ದಲ್ಲಿಯೇ ಭಿನ್ನತೆಗಳಿವೆ. ಸಮಾಜವಾದದ ಅಭಿಪ್ರಾಯದ ಪ್ರಕಾರ ಆರ್ಥಿಕ ದರ್ಜೆಯ ಭಿನ್ನತೆ ನೈಸರ್ಗಿಕವಲ್ಲ. ಆದರೆ ಕುರ್‌ಆನಿನಲ್ಲಿ ಹಲವು ಕಡೆ ಈ ಭಿನ್ನತೆ ನೈಸರ್ಗಿಕವಾದುದು ಮತ್ತು ಅದರ ಪ್ರಕಟನೆಯು ಸಹಜವೆಂದು ಸೂಚಿಸಿದೆ. ಇಲ್ಲಿ ಎಲ್ಲ ಜನರ ಆರ್ಥಿಕ ಪರಿಸ್ಥಿತಿ ಸಮಾನವಾಗಿರುತ್ತಿದ್ದರೆ, ಸ್ಪರ್ಧಾತ್ಮಕ ಪರಿಸ್ಥಿತಿ ಉಂಟಾಗುತ್ತಿರಲಿಲ್ಲ. ಈ ಪರಿಸ್ಥಿತಿ ಉಂಟಾಗದಿರುತ್ತಿದ್ದರೆ ಮನುಷ್ಯನ ಸ್ವಾಭಾವಿಕ ಶಕ್ತಿ ಸಾಮರ್ಥ್ಯಗಳು ಪ್ರಗತಿ ಹೊಂದಲು ಯಾವುದೇ ಪ್ರೇರಣಾ ಶಕ್ತಿ ಇರುತ್ತಿರಲಿಲ್ಲ

ಹಾಗೂ ಲೋಕದಲ್ಲಿ ಸಾಮೂಹಿಕ ಜೀವನದ ವ್ಯವಹಾರ ಚಟುವಟಿಕೆಗಳು ಪ್ರಕಟವಾಗುತ್ತಿರಲಿಲ್ಲ.

وَهُوَ الَّذِي جَعَلَكُمْ خَلَٰٓئِفَ الْأَرْضِ وَرَفَعَ بَعْضَكُمْ فَوْقَ بَعْضٍ دَرَجَٰتٍ لِّيَبْلُوَكُمْ فِي مَآ ءَاتَىٰكُمْ ۗ إِنَّ رَبَّكَ سَرِيعُ الْعِقَابِ وَإِنَّهُۥ لَغَفُورٌ رَّحِيمٌ ﴿١٦٥﴾

"ಅವನೇ ನಿಮ್ಮನ್ನು ಭೂಮಿಯ ಪ್ರತಿನಿಧಿಗಳನ್ನಾಗಿ ಮಾಡಿದನು ಮತ್ತು ನಿಮಗೆ ಕೊಟ್ಟಿರುವುದರಲ್ಲಿ ನಿಮ್ಮನ್ನು ಪರೀಕ್ಷಿಸಲಿಕ್ಕಾಗಿ ನಿಮ್ಮಲ್ಲಿ ಕೆಲವರಿಗೆ ಕೆಲವರಿಗಿಂತ ಉನ್ನತ ಪದವಿಗಳನ್ನು ನೀಡಿದನು. ನಿಶ್ಚಯವಾಗಿಯೂ ನಿಮ್ಮ ಪ್ರಭು ಶಿಕ್ಷೆ ಕೊಡುವುದರಲ್ಲಿ ಅತಿ ಶೀಘ್ರನು ಮತ್ತು ಅತ್ಯಂತ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ." (ಪವಿತ್ರ ಕುರ್‌ಆನ್: 6: 165)

## ಮಾನವ ಜೀವನದ ಏರಿಳಿತಗಳು

ಈ ಸೂಕ್ತದಲ್ಲಿ ಮೂರು ವಿಷಯಗಳ ಕುರಿತು ಸೂಚಿಸಲಾಗಿದೆ: ಪ್ರಥಮವಾಗಿ ಇಲ್ಲಿ ಪ್ರತಿಯೊಂದು ರಂಗದಲ್ಲಿ ಒಂದು ರೀತಿಯ ವಾರೀಸುತನದ ಸರಣಿಯು ಜಾರಿಯಲ್ಲಿರುವಂತೆ ಮಾನವ ಜೀವನದ ಕಾರ್ಯಭಾರವನ್ನು ದೇವನು ನಡೆಸಿದ್ದಾನೆ. ಅಂದರೆ ಒಬ್ಬ ವ್ಯಕ್ತಿ ಅಥವಾ ಸಮೂಹ ಗತಿಸಿದ ನಂತರ ಇನ್ನೊಂದು ವ್ಯಕ್ತಿ ಮತ್ತು ಸಮೂಹ ಅದರ ಸ್ಥಾನವನ್ನು ತುಂಬುತ್ತದೆ ಹಾಗೂ ಪರಿಶ್ರಮಗಳ ಪರಿಣಾಮ ಫಲಗಳ ವಾರೀಸುದಾರರಾಗುತ್ತವೆ. ಎರಡನೆಯದಾಗಿ, ಸ್ಥಾನಮಾನದ ದೃಷ್ಟಿಯಲ್ಲಿ ಎಲ್ಲರೂ ಸಮಾನರಲ್ಲ, ಕೆಲವರು ಮೇಲಿನ ಸ್ಥಾನದಲ್ಲಿದ್ದರೆ ಇನ್ನು ಕೆಲವರು ಅವರಿಗಿಂತ ಕೆಳಗಿನವರು. ಸಮೂಹವು ತನ್ನ ಪರಿಶ್ರಮದ ಮೂಲಕ ಸಾಧ್ಯವಿರುವ ಸ್ಥಾನವನ್ನು ಗಳಿಸುವ ಅವಕಾಶ ಸಿಗುವಂತಾಗಲು ಈ ಆರ್ಥಿಕ ದರ್ಜೆಯ ಮೇಲು-ಕೀಳುಗಳಿವೆ. ಕೊನೆಯದಾಗಿ ಹೀಗೆ ಆದೇಶಿಸಲಾಗಿದೆ: ದೇವನ ಪ್ರತಿಫಲದ ಕಾನೂನು ಮಂದಗತಿಯದ್ದಲ್ಲ. ಅಂದರೆ ಪ್ರತಿಫಲಗಳ ವ್ಯವಹಾರವು ಬಯಕೆ, ಶ್ರಮಗಳ ಅದೇ ಪರೀಕ್ಷಾ ಗೃಹ ದೊಂದಿಗೆ ಹೊಂದಿಕೊಂಡಿದೆ. ಯಾರ ಕರ್ಮಗಳು ಯಾವ ರೀತಿಯಲ್ಲಿರುತ್ತವೋ ಅದಕ್ಕೆ ತಕ್ಕ ಪರಿಣಾಮವೂ ಅವನ ಪಾಲಿಗೆ ಬರುವುವು.

ಇದೇ ರೀತಿ ಕುರ್‌ಆನಿನಲ್ಲಿ ಪದೇ ಪದೇ ಹೇಳಲಾಗಿದೆ:

وَاللَّهُ فَضَّلَ بَعْضَكُمْ عَلَىٰ بَعْضٍ فِي الرِّزْقِ

"ಅಲ್ಲಾಹನು ನಿಮ್ಮ ಪೈಕಿ ಕೆಲವರಿಗೆ ಕೆಲವರ ಮೇಲೆ ಜೀವನಾಧಾರದಲ್ಲಿ ಶ್ರೇಷ್ಠತೆಯನ್ನು ದಯಪಾಲಿಸಿದ್ದಾನೆ." (ಪವಿತ್ರ ಕುರ್‌ಆನ್: 16: 71)

نَحْنُ قَسَمْنَا بَيْنَهُم مَّعِيشَتَهُمْ فِي الْحَيٰوةِ الدُّنْيَا وَ رَفَعْنَا بَعْضَهُمْ فَوْقَ بَعْضٍ دَرَجٰتٍ

"ಲೌಕಿಕ ಜೀವನದಲ್ಲಿ ಇವರ ಉಪಜೀವನ ಸಾಧನಗಳನ್ನು ನಾವು ಇವರ ನಡುವೆ ಹಂಚಿದ್ದೇವೆ ಮತ್ತು ಇವರು ಪರಸ್ಪರರಿಂದ ಸೇವೆ ಪಡೆಯು ವಂತಾಗಲು ನಾವು ಇವರಲ್ಲಿ ಕೆಲವರಿಗೆ ಇನ್ನು ಕೆಲವರಿಗಿಂತ ಅನೇಕ ಮೇಲ್ಮೆ ನೀಡಿರುವೆವು."

(ಪವಿತ್ರ ಕುರ್‌ಆನ್: 43 : 32)

## ಕುರ್‌ಆನಿನ ಶಿಕ್ಷಣಗಳ ಸಾರ

ಮಾನವನ ಸಾಮೂಹಿಕ ಆರ್ಥಿಕ ಸಮಸ್ಯೆಗಳಿಗೆ ಪವಿತ್ರ ಕುರ್‌ಆನ್ ಪರಿಹಾರ ಸೂಚಿಸುವಂತೆ, ಅದು ಆರ್ಥಿಕ ಶ್ರೇಣಿಯಲ್ಲಿ ಸಮಾನತೆ ಸ್ಥಾಪಿಸಲು ಬಯಸುವುದಿಲ್ಲ, ಬದಲಾಗಿ ಆರ್ಥಿಕ ಹಕ್ಕಿನಲ್ಲಿ ಸಮಾನತೆಯನ್ನು ಸ್ಥಾಪಿಸುತ್ತದೆ. ಅಂದರೆ ಸರ್ವರಿಗೂ ಒಂದೇ ರೀತಿಯ ಆರ್ಥಿಕ ಮೂಲಗಳು ಸಿಗಬೇಕಾಗಿಲ್ಲ, ಆದರೆ ಎಲ್ಲರಿಗೂ ಪರಿಶ್ರಮ ಮತ್ತು ಪ್ರಗತಿಯ ಅವಕಾಶಗಳು ಸಮಾನ ರೂಪದಲ್ಲಿ ತೆರೆದಿರಬೇಕು ಹಾಗೂ ಎಲ್ಲಾ ರೀತಿಯ ಜನಾಂಗೀಯ, ಭೌಗೋಳಿಕ, ಕೌಟುಂಬಿಕ ಮತ್ತು ವರ್ಗೀಯ ತಾರತಮ್ಯವನ್ನು ಅಳಿಸಿ ಜೀವನದ ಪ್ರತಿಯೊಂದು ರಂಗದಲ್ಲಿ ಕುರ್‌ಆನ್ ಸಮಾನತೆಯನ್ನು ಘೋಷಿಸಿತು. ಸಮಾಜದ ಉನ್ನತ ವರ್ಗಗಳು ದುರ್ಬಲ ವರ್ಗಗಳ ಆರ್ಥಿಕ ಪ್ರಗತಿ ಮತ್ತು ಅಭಿವೃದ್ಧಿಯ ಹಾದಿಯಲ್ಲಿ ಉಂಟು ಮಾಡಿದ್ದ ಎಲ್ಲಾ ಅಡೆತಡೆಗಳನ್ನು ನಿವಾರಿಸಿತು. ಅದು ಸೀಮಿತ ಕೈಗಳಲ್ಲಿ ಹೇರಳ ಸಂಪತ್ತಿನ ಶೇಖರಣೆಯನ್ನು ಕಾನೂನಿನ ಮೂಲಕ ತಡೆಯಿತು. ಜೀವನದ ಎಲ್ಲಾ ರಂಗಗಳಲ್ಲಿ ಸಂಪತ್ತಿನ ಶೇಖರಣೆಯ ಬದಲು ವಿತರಣೆಗೆ ಒತ್ತು ನೀಡಿತು. 'ಸ್ವಯಂ ಶ್ರೀಮಂತಿಕೆ ಒಂದು ಹಕ್ಕು' ಎಂಬ ವಾದವನ್ನು ಖಡಾಖಂಡಿತವಾಗಿ ನಿರಾಕರಿಸಿತು. ಅಸಂತುಲಿತ ಬಂಡವಾಳಶಾಹಿತ್ವದ ಎಲ್ಲಾ ಮಾಧ್ಯಮಗಳನ್ನು ತಡೆಯಿತು. ಬಡ್ಡಿಯ ವಿವಿಧ ರೂಪಗಳನ್ನು ನಿಷೇಧಿಸಿತು, ಜೂಜನ್ನು ಯಾವ ಪರಿಸ್ಥಿತಿಯಲ್ಲೂ ಅನುಮತಿಸಲಿಲ್ಲ.

ಈ ಎಲ್ಲಾ ವಿಷಯಗಳಿಗಿಂತ ಮಿಗಿಲಾಗಿ ಮಾನವೀಯ ಸೇವೆಯನ್ನು ಜೀವನದ ಕರ್ತವ್ಯಗಳೆಂದು ಪರಿಗಣಿಸಿತು. ಮಾತ್ರವಲ್ಲ, ಅದು ದೇವ ಮಾರ್ಗದ ಖರ್ಚಿಗೆ ಉನ್ನತ ಸ್ಥಾನ ನೀಡಿತು. ಸಂಪಾದಿಸುವವರಲ್ಲಿ ಪ್ರತಿಯೋರ್ವನು ವಾರ್ಷಿಕ ಕರದ ರೂಪದಲ್ಲಿ ತನ್ನ ಆದಾಯದ ಒಂದು ಭಾಗವನ್ನು ಇತರರಿಗಾಗಿ ತೆಗೆದಿಡುವಂತೆ ನಿರ್ಬಂಧಿಸಿತು. ಇದು ಇಸ್ಲಾಮ್ ರೂಪಿಸಿದ ಸಾಮೂಹಿಕ ವ್ಯವಸ್ಥೆಯ ಚಿತ್ರಣವಾಗಿದೆ.

## ಸಮಾಜವಾದದ ಬೇಡಿಕೆ

ಆದರೆ ಸಮಾಜವಾದವು ಕೇವಲ ಇಷ್ಟಕ್ಕೇ ತೃಪ್ತಿ ಪಡುವುದಿಲ್ಲ. ಅದು ಇನ್ನೂ ಮುಂದುವರಿದು ವೈಯಕ್ತಿಕ ಮಾಲಕತ್ವದ ಸ್ಥಾನದಲ್ಲಿ ರಾಷ್ಟ್ರೀಯ ಮಾಲಕತ್ವದ ವ್ಯವಸ್ಥೆಯನ್ನು ಸ್ಥಾಪಿಸಬಯಸುತ್ತದೆ. ಆರ್ಥಿಕ ದರ್ಜೆಗಳ ಭಿನ್ನತೆಯು ನೈಸರ್ಗಿಕವಾಗಿದ್ದು, ಅದು ಸಾಮೂಹಿಕ ಜೀವನದ ಚಟುವಟಿಕೆಗಳ ಕೇಂದ್ರ ಮತ್ತು ಪ್ರಗತಿಗೆ ಪ್ರೇರಕವಾಗಿದೆ. ಸಮಾಜವಾದದ ಪ್ರಕಾರ, ಸಮಾಜದ ವ್ಯವಸ್ಥೆಯು ಆರ್ಥಿಕ ಸಮಾನತೆಯ ಆಧಾರದಲ್ಲಿ ಸ್ಥಾಪಿಸಲ್ಪಟ್ಟರೆ, ಅದು ಬೇರೆಯದೇ ರೀತಿಯ ಮಾನಸಿಕ ಮತ್ತು ಆಂತರಿಕ ಚಟುವಟಿಕೆಗಳಿಗೆ ಪ್ರೇರಕವಾಗಬಹುದು. ಹಾಗೆಯೇ ಆರ್ಥಿಕ ವ್ಯವಸ್ಥೆಯು ಈ ಹಿಂದೆ ಇರುವಂತೆಯೇ ಜಾರಿಯಲ್ಲಿರುವುದು.

## ನೈಜ ಅನುಭವ

ಲೋಕದ ಈವರೆಗಿನ ಅನುಭವ ಇದಕ್ಕೆ ವಿರುದ್ಧವಾಗಿದೆ ಮತ್ತು ರಷ್ಯಾದ ಹೊಸ ಅನುಭವವೂ ಇಷ್ಟರ ವರೆಗೆ ತನ್ನ ಸಿದ್ಧಾಂತವನ್ನು ಪ್ರಯೋಗಿಸಿಲ್ಲ. ಆದರೆ ಸಮಾಜವಾದಕ್ಕೆ ಇನ್ನೂ ಹೆಚ್ಚಿನ ಕಾಲಾವಕಾಶದ ಬೇಡಿಕೆಯ ಹಕ್ಕು ಇದೆ ಎಂಬುದರಲ್ಲಿ ಸಂಶಯವಿಲ್ಲ. **(ಇದು 1936ರ ಮಾತೆಂಬುದು ನೆನಪಿರಲಿ– ಅನು)**



# ಸಮಾರೋಪ

## ಪ್ರಸಕ್ತ ಝಕಾತ್ ಪಾವತಿಯ ವಿಧಾನ

ಇಸ್ಲಾಮಿನ ಪ್ರತಿಯೊಂದು ಆದೇಶದಲ್ಲಿ ಖರ್ಚು ಮಾಡುವ ಅಂಶ ಎದ್ದು ಕಾಣುತ್ತದೆ. ಹಜ್ಜ್, ಝಕಾತ್ ಮತ್ತಿತರ ಆದೇಶಗಳಲ್ಲಿಯೂ ಇದನ್ನೇ ಕಾಣಬಹುದು. ಇದರ ಅರ್ಥ ಇಸ್ಲಾಮ್ ನಿಮ್ಮ ಜೇಬುಗಳಿಂದಲೂ ಸ್ವಲ್ಪ ಬಯಸುತ್ತದೆ.

ಈದ್‌ನ ಸಂದರ್ಭದಲ್ಲಿ ನಿಮ್ಮಲ್ಲಿ ಹೆಚ್ಚಿನವರು 'ಫಿತ್ರ್' ನೀಡಿರಬಹುದು, ಇದನ್ನು ಹಲವರು ಮುಂದೆ ನೀಡಲೂ ಬಹುದು. ಈ ಸಂದರ್ಭದಲ್ಲಿ ಭಾರತದ ಮೂಲೆ ಮೂಲೆಗಳಿಂದ ಜನರು ಬೇಡಲು ತಮ್ಮ ಜೋಳಿಗೆಯೊಂದಿಗೆ ದೊಡ್ಡ ನಗರಗಳಿಗೆ ತಲುಪುತ್ತಾರೆ ಆದರೆ ನೀವು ಅವರಿಗೆ ಫಿತ್ರ್, ಝಕಾತ್ ಮತ್ತು ಸದಕಾ ನೀಡುವ ರೀತಿಯು ಸರಿಯಾದ ವಿಧಾನವಲ್ಲವೆಂದು ನಾನು ಹೇಳುತ್ತೇನೆ.

## ಇಸ್ಲಾಮ್ ಮತ್ತು ಸರಕಾರದ ತೆರಿಗೆ

ಝಕಾತ್ ಏನೆಂದು ನೀವು ಬಲ್ಲಿರಾ? ತನ್ನ ಅಗತ್ಯಗಳನ್ನು ಪೂರೈಸಿದ ಬಳಿಕ ಒಂದು ನಿರ್ದಿಷ್ಟ ಮೊತ್ತವನ್ನು ವರ್ಷವಿಡೀ ಉಳಿತಾಯ ಮಾಡಿರುವ ಪ್ರತೀಯೋರ್ವನ ಮೇಲೆ ಇಸ್ಲಾಮ್ ವಿಧಿಸಿರುವ ಒಂದು ಆದಾಯ ತೆರಿಗೆಯಾಗಿದೆ.[1] ಯಾರು ವರ್ಷವಿಡೀ 40 ರುಪಾಯಿ ಸಂಗ್ರಹಿಸಿಟ್ಟಿದ್ದಾರೋ ಅವರು ಅದರಿಂದ ಒಂದು ರೂಪಾಯಿ ತೆರಿಗೆ ಪಾವತಿಸಬೇಕಾದುದು ಝಕಾತ್‌ನ ನಿಯಮವಾಗಿದೆ.

ಸರಕಾರಗಳೂ ಆದಾಯ ತೆರಿಗೆ ವಸೂಲಿ ಮಾಡುತ್ತವೆ. ಆದರೆ ಇವೆರಡರ ಮಧ್ಯೆ ಇರುವ ವ್ಯತ್ಯಾಸವೇನೆಂದರೆ, ಸರಕಾರವು ಜನರಿಂದ ತೆರಿಗೆ ಪಡೆದು ತನ್ನ ಕೆಲಸ ಕಾರ್ಯಗಳಿಗಾಗಿ ಅದನ್ನು ವ್ಯಯಿಸುತ್ತದೆ. ಇಸ್ಲಾಮ್ ಝಕಾತ್‌ನ ಮೊತ್ತವನ್ನು ವ್ಯಯಿಸುವ 8 ವಿಭಾಗಗಳನ್ನು ಗುರುತಿಸಿದೆ ಮತ್ತು ಇದು ಬಡವರು, ಅಪೇಕ್ಷಿತರು, ದರಿದ್ರರಲ್ಲಿ ವಿತರಿಸಲ್ಪಡುತ್ತದೆ.

1. ಇದು ವಾಸ್ತವದಲ್ಲಿ ತೆರಿಗೆಯಲ್ಲ, ವಸ್ತುಸ್ಥಿತಿಯನ್ನು ಮನವರಿಕೆ ಮಾಡಿಸಲಿಕ್ಕಾಗಿ ಮೌಲಾನಾರವರು ಅದನ್ನು ತೆರಿಗೆ ಎಂದು ಹೆಸರಿಸಿದ್ದಾರೆ. [ಅನು]

ಕುರ್‌ಆನಿನಲ್ಲಿ ಝಕಾತಿನ ಕುರಿತು ಸ್ಪಷವಾದ ಆದೇಶವಿದೆ. ಅಲ್ಲಾಹನು ಅದನ್ನು ನಿರ್ದಿಷ್ಟ ಮೊತ್ತವನ್ನು ಹೊಂದಿದವರ ಮೇಲೆ ಮಾತ್ರ ಕಡ್ಡಾಯಗೊಳಿಸಿರುವನು. ಕುರ್‌ಆನಿನಲ್ಲಿ ನಮಾಝ್ ಮತ್ತು ಝಕಾತನ್ನು ಜೊತೆಯಾಗಿಯೇ ಉಲ್ಲೇಖಿಸಲಾಗಿದೆ. ಆದರೆ ಭಾರತದ ಮುಸ್ಲಿಮರು ಈ ಕಡ್ಡಾಯ ಪಾವತಿಯ ಕಡೆಗೆ ಗಮನ ಹರಿಸುವುದಿಲ್ಲ. ನಿಮ್ಮಲ್ಲಿ ಕೆಲವರು ಝಕಾತ್ ನೀಡುವುದಿಲ್ಲ, ಆದರೆ ನೀಡುವವರೂ ನೀಡದವರಿಗೆ ಸಮಾನವಾಗಿದ್ದಾರೆ ಏಕೆಂದರೆ ಅವರು ಇಸ್ಲಾಮಿನ ಆದೇಶ ಪ್ರಕಾರ ನೀಡುತ್ತಿಲ್ಲ.

## ಝಕಾತ್ ನಿರ್ಧಾರದಲ್ಲಿ ಸರಳತೆ

ತಮಗೆ ತಿಳಿದಿರುವಂತೆ ಆದಾಯ ತೆರಿಗೆ ವಸೂಲಿಗಾಗಿ ಸರಕಾರದ ವತಿಯಿಂದ ವಸೂಲಿಗಾರರನ್ನು ನೇಮಿಸಲಾಗುತ್ತದೆ. ಅವರು ಜನರ ಕಡತ, ಖಾತೆಗಳನ್ನು ಪರಿಶೀಲಿಸಿ ತೆರಿಗೆ ಮೊತ್ತವನ್ನು ನಿಗದಿಪಡಿಸುತ್ತಾರೆ. ಆದರೆ ಝಕಾತ್ ಪಾವತಿಸುವ ಜನರಿಗೆ ಇಂತಹ ಪರಿಸ್ಥಿತಿ ಎದುರಾಗುವುದಿಲ್ಲ. ಇಸ್ಲಾಮ್ ನಿಮ್ಮ ತೆರಿಗೆ ಪಾವತಿಯಲ್ಲಿ ಎಷ್ಟೊಂದು ಸೌಲಭ್ಯಗಳನ್ನು ಒದಗಿಸಿದೆ. ನೀವು ಸ್ವತಃ ನಿಮ್ಮ ವ್ಯಾಪಾರ ಮತ್ತು ಆದಾಯದ ಒಟ್ಟು ಅವಲೋಕನ ನಡೆಸಿ, ಉಳಿತಾಯವನ್ನು ನಿರ್ಧರಿಸಿ ನಿಮ್ಮ ಕೈಯಿಂದಲೇ ಝಕಾತ್ ಮೊತ್ತವನ್ನು ಮೀಸಲಿಡುವ ಸೌಲಭ್ಯಗಳನ್ನು ಇಸ್ಲಾಮ್ ಒದಗಿಸಿದೆ. ಇದಕ್ಕಿಂತ ಸುಲಭ ಇನ್ನೇನು ಸಾಧ್ಯ?

## ಝಕಾತ್ ನೀಡುವುದೂ ನೀಡದಿರುವುದೂ ಒಂದೇ

ನಿಮ್ಮಲ್ಲಿ ಝಕಾತ್ ಪಾವತಿಸುವವರು ಕೂಡ ಇಸ್ಲಾಮೀ ಆದೇಶದಂತೆ ಅದನ್ನು ಅನುಷ್ಠಾನಗೊಳಿಸುತ್ತಿಲ್ಲ. ಆದ್ದರಿಂದ ನಿಮ್ಮ ಝಕಾತಿನ ಪಾವತಿಯು ವ್ಯರ್ಥವಾಗುತ್ತಿದೆ; ಹೀಗೆ ನೀವು ಝಕಾತ್ ನೀಡದಿರುವವರಿಗೆ ಸಮಾನವಾಗುತ್ತೀರಿ. ಇಸ್ಲಾಮ್ ಝಕಾತ್‌ನ ಮೊತ್ತವನ್ನು ಸಾಮೂಹಿಕವಾಗಿ ಖರ್ಚು ಮಾಡುವ ಆದೇಶ ನೀಡಿದೆ. ಆದರೆ ನೀವು ವೈಯಕ್ತಿಕವಾಗಿ ನೀಡುತ್ತಿದ್ದೀರಿ. ಇಸ್ಲಾಮಿನ ಆದೇಶ, ಸಹಾಬಿಗಳ ಮಾದರಿ ಜೀವನವು ಝಕಾತ್‌ನ ಮೊತ್ತ ಸಾಮೂಹಿಕವಾಗಿಯೇ ವಿತರಿಸಲ್ಪಡಬೇಕೆಂಬುದನ್ನು ಕಲಿಸುತ್ತದೆ. ವೈಯಕ್ತಿಕವಾಗಿ ನೀಡುವ ಕ್ರಮ ಖುಲಫಾವುರ್ರಾಶಿದೀನ್‌ಗಳ ಕಾಲದ ನಂತರ ಜಾರಿಗೆ ಬಂತು.

## ಸಹಾಬಿಗಳ ಮಾದರಿ

ಬನೂ ಉಮಯ್ಯ ವಂಶದ ಖಲೀಫರ ಆರಂಭ ಕಾಲದ ಖಲೀಫರು ಅತ್ಯಂತ ಕರ್ಮಭ್ರಷ್ಟರಾಗಿದ್ದ ಕಾರಣ ಝಕಾತನ್ನು ಬೈತುಲ್ ಮಾಲ್‌ಗೆ ಏಕೆ ಕಳುಹಿಸಬೇಕೆಂಬ ಪ್ರಶ್ನೆ ಜನರಲ್ಲಿ ಉದ್ಭವಿಸಿತು. ಖಲೀಫರ ಕರ್ಮಭ್ರಷ್ಟತೆಯಿಂದ ಝಕಾತ್ ಪಾವತಿಯಲ್ಲಿ ಯಾವುದೇ ವ್ಯತ್ಯಾಸ ಬರುವುದಿಲ್ಲ. ಝಕಾತನ್ನು ಅದೇ ಖಲೀಫಾಗೆ ನೀಡಬೇಕೆಂದು

ಎಲ್ಲಾ ಸಹಾಬಿಗಳು ಒಮ್ಮತದ ಅಭಿಪ್ರಾಯವಾಗಿತ್ತು ಮತ್ತು ಅವರು ಅದರಂತೆಯೇ ನಡೆದರು. ಅಬ್ಬಾಸಿ ಆಡಳಿತದಲ್ಲಿ ತಾರ್ತಾರಿ ಸತ್ಯನಿಷೇಧಿಗಳು ಮತ್ತು ಬಹು ದೇವಾರಾಧಕರು ಬಗ್ದಾದನ್ನು ವಶಪಡಿಸಿಕೊಂಡು ಖಿಲಾಫತನ್ನು ಮುಗಿಸಿಬಿಟ್ಟರು. ಆ ಕಾಲದಲ್ಲಿ ಮುಸ್ಲಿಮ್ ಧುರೀಣರು ಸೇರಿ, ಪ್ರಸಕ್ತ ಸನ್ನಿವೇಶದಲ್ಲಿ ನಾವು ಸರಕಾರವನ್ನು ಬದಲಿಸಲು ಶಕ್ತರಲ್ಲವೆಂದಾದರೆ, ನಮ್ಮ ಝಕಾತ್‌ನ ಸಂಗ್ರಹ ಮತ್ತು ವಿತರಣೆಯ ವ್ಯವಸ್ಥೆಗಾಗಿ ಖಾಝಿ ಮತ್ತು ಸಿಬ್ಬಂದಿಗಳನ್ನು ನೇಮಿಸುವಂತೆ ಸರಕಾರಕ್ಕೆ ಮನವಿ ಸಲ್ಲಿಸಬೇಕೆಂದು ತೀರ್ಮಾನ ಕೈಗೊಂಡರು.

## ವಿರೋಧಿಗಳ ನೆಪ

ಕೆಲವರು ಭಾರತದಲ್ಲಿ ಇಸ್ಲಾಮೀ ಆಡಳಿತವಿಲ್ಲದಿರುವುದರಿಂದ ಇಲ್ಲಿ ಸಾಮೂಹಿಕ ಝಕಾತ್ ವ್ಯವಸ್ಥೆ ಸಾಧ್ಯವಿಲ್ಲವೆಂಬ ನೆಪ ಹೂಡಬಹುದು. ಆದರೆ ಇದೊಂದು ಕುಂಟು ನೆಪವೆಂದು ನಾನು ಹೇಳುತ್ತೇನೆ. ನಿಮ್ಮ ಬೇರಾವ ಕಾರ್ಯಗಳು ಈ ಕಾರಣಕ್ಕಾಗಿ ನಿಂತು ಬಿಟ್ಟಿದೆ? ಈ ಪರಿಸ್ಥಿತಿಯಲ್ಲಿಯೂ ನಿಮಗೆ ಸಾಮೂಹಿಕ ವಿತರಣೆಯ ವ್ಯವಸ್ಥೆ ಮಾಡಬಹುದೆಂದಾದರೆ ಈ ನೆಪಕ್ಕೆ ಯಾವುದೇ ಆಧಾರವಿಲ್ಲ. ನೀವು ವ್ಯರ್ಥ ಮತ್ತು ಅನಗತ್ಯ ಇಸ್ಲಾಮೇತರ ಕಾರ್ಯಗಳಿಗಾಗಿ ಸಂಘ ಸಂಸ್ಥೆಗಳನ್ನು ಸ್ಥಾಪಿಸುತ್ತಿರುವಾಗ ಝಕಾತನ್ನು ಅದರ ಇಸ್ಲಾಮೀ ವಿಧಿಯಂತೆ ವ್ಯಯಿಸಲು ಒಂದು ಸಂಸ್ಥೆಯನ್ನು ರಚಿಸಲು ನಿಮ್ಮಿಂದ ಸಾಧ್ಯವಿಲ್ಲವೇ?

## ಸಾಮೂಹಿಕ ಜೀವನದ ಚಿತ್ರಣ ಬದಲಾಗಿದೆ

ವಾಸ್ತವದಲ್ಲಿ ಇಲ್ಲಿ ಇಸ್ಲಾಮಿನ ಚಿತ್ರಣವೇ ಬದಲಾಗಿದೆ. ಇಸ್ಲಾಮ್ ಪ್ರಸ್ತುತಪಡಿಸುವ ಸಾಮೂಹಿಕ ಜೀವನದ ಪೂರ್ಣ ನಕಾಶೆಯು ಬೇರೆಯೇ ಇದೆ. ನೀವು ನಿರ್ಮಿಸುವ ಮನೆಗಳಲ್ಲಿ ಮಲಗಲು, ಅಡುಗೆ ಮಾಡಲು, ವಸ್ತುಗಳನ್ನು ಶೇಖರಿಸಲು ಹಲವು ಕೋಣೆಗಳಿರುತ್ತವೆ. ಹೀಗಿರುವಾಗ ಒಬ್ಬನು ತನ್ನ ಎಲ್ಲಾ ಕೆಲಸಗಳಿಗಾಗಿ ಒಂದೇ ಕೋಣೆಯನ್ನು ಮಾತ್ರ ಬಳಸಿ ಇನ್ನುಳಿದ ಕೋಣೆಗಳನ್ನು ಅಗತ್ಯಕ್ಕಾಗಿ ಬಳಸುವುದಿಲ್ಲವೆಂದಾದರೆ ಆತ ಮನೆಯ ನೈಜ ಸುಖವನ್ನು ಅನುಭವಿಸಬಲ್ಲನೇ? ಖಂಡಿತಾ ಇಲ್ಲ. ಇದೇ ರೀತಿ ಇಸ್ಲಾಮೀ ಜೀವನ ವ್ಯವಸ್ಥೆಯ ಎಲ್ಲಾ ಅಂಶಗಳು ಎಲ್ಲಿಯ ವರೆಗೆ ನಮ್ಮ ಜೀವನ ವಿಧಾನದ ಭಾಗವಾಗಿರುವುದಿಲ್ಲವೋ ಅಲ್ಲಿಯ ವರೆಗೂ ಅದರ ಅನುಗ್ರಹ ಮತ್ತು ಸಮೃದ್ಧಿಗಳ ರುಚಿ ಸವಿಯಲು ಸಾಧ್ಯವಿಲ್ಲ.

## ಸಮಗ್ರ ಮತ್ತು ಪರಿಪೂರ್ಣ ಇಸ್ಲಾಮೀ ನೀತಿ

ವಾಸ್ತವದಲ್ಲಿ ಮುಸ್ಲಿಮರು ಇಸ್ಲಾಮೀ ಆದೇಶಗಳನ್ನು ತ್ಯಜಿಸಿದ್ದಾರೆ. ಅವರಲ್ಲಿ ಕೇವಲ ತೋರಿಕೆಯ ಮತ್ತು ಸ್ಫೂರ್ತಿ ರಹಿತ ಚಟುವಟಿಕೆಗಳು ಬಾಕಿ ಉಳಿದಿವೆ.

ಝಕಾತ್‌ನ ಈ ಆದೇಶವನ್ನೇ ನೋಡಿ, ಒಂದು ವೇಳೆ ಮುಸ್ಲಿಮರು ಝಕಾತ್‌ನ ವ್ಯವಸ್ಥೆಯನ್ನು ಸಮರ್ಪಕವಾಗಿ ಮಾಡುತ್ತಿದ್ದರೆ ಇಂದು ಸಮುದಾಯದ ಪರಿಸ್ಥಿತಿ ಹೀಗಿರುತ್ತಿರಲಿಲ್ಲ. ಝಕಾತ್ ಇಸ್ಲಾಮಿನ ಸಮಗ್ರ ಮತ್ತು ಪರಿಪೂರ್ಣ ನೀತಿಯಾಗಿದ್ದು ಲೋಕದ ಯಾವುದೇ ಕಾನೂನು ಇದಕ್ಕೆ ಸರಿಸಾಟಿಯಾಗದು. ಬಡವರ, ದರಿದ್ರರ ಮತ್ತು ಅಪೇಕ್ಷಿತರ ಸಹಾಯಕ್ಕಾಗಿ ಇಸ್ಲಾಮ್ ಝಕಾತ್‌ನ ಆದೇಶ ನೀಡಿದೆ.

## ಮುಸ್ಲಿಮ್ ಮತ್ತು ಸತ್ಯನಿಷೇಧಿಯ ಗುರುತು

ಸಂಪತ್ತು ಕೆಲವೇ ಮಂದಿಗಳ ಕೈಯಲ್ಲಿ ಶೇಖರಣೆಯಾಗುವುದನ್ನು ಇಸ್ಲಾಮ್ ಬಯಸುವುದಿಲ್ಲ. ಕೈಗಳು ತೆರೆದಿರುವುದು ಮುಸ್ಲಿಮರ ವಿಶಿಷ್ಟ ಗುರುತಾಗಿದೆಯೆಂದು ಇಸ್ಲಾಮ್ ಪರಿಚಯಿಸಿತು. ಅಂದರೆ ಅವರು ಅಲ್ಲಾಹನ ಮಾರ್ಗದಲ್ಲಿ ಖರ್ಚು ಮಾಡುವವರಾಗಿದ್ದಾರೆ. ಕೈಗಳು ಕೊರಳಿಗೆ ಕಟ್ಟಿ ಕೊಂಡಿರುವುದು ಸತ್ಯನಿಷೇಧಿ (ಕಾಫಿರ್)ಗಳ ಗುರುತಾಗಿದೆ. ಅಂದರೆ ಅವರು ಒಳಿತಿನ ಕಾರ್ಯಗಳಿಗೆ ಖರ್ಚು ಮಾಡಲಾರರು. ಸಂಪತ್ತು ಅನಿಯಂತ್ರಿತವಾಗಿ ಒಬ್ಬ ವ್ಯಕ್ತಿಯ ಕೈಯಲ್ಲಿ ಶೇಖರಣೆ ಆಗುವುದನ್ನಾಗಲಿ ಅಥವಾ ಅವನು ಅದನ್ನು ದಾಸ್ತಾನು ಮಾಡುವುದನ್ನಾಗಲಿ ಇಸ್ಲಾಮ್ ಅನುಮತಿಸುವುದಿಲ್ಲ. ಅದು ಸಂಪತ್ತು ಹಂಚಲ್ಪಡುತ್ತಿರುವುದನ್ನು ಬಯಸುತ್ತದೆ. ಕಾಳಸಂತೆಯನ್ನು ವಿರೋಧಿಸುತ್ತದೆ. ಇದರ ಈ ನೀತಿಯು ಝಕಾತ್ ಮತ್ತು ವಾರೀಸು ಹಕ್ಕಿನಲ್ಲಿ ಸಮಾನವಾಗಿ ಬೇರೂರಿವೆ.

## ಸಾಮೂಹಿಕವಾಗಿ ಖರ್ಚು ಮಾಡುವುದರ ಪ್ರಯೋಜನಗಳು

ಸಾಮೂಹಿಕವಾಗಿ ವ್ಯಯಿಸುವುದರಿಂದ ಇಸ್ಲಾಮಿನ ಆದೇಶ ಪಾಲನೆಯಾಗುವುದಲ್ಲದೆ ಇತರ ಪ್ರಯೋಜನಗಳೂ ಇವೆಯೆಂದು ನೀವು ತಿಳಿದಿದ್ದೀರಿ. ಅಕಟಾ! ಅದರ ಪ್ರಯೋಜನಗಳನ್ನು ತಿಳಿಸಲು ನನ್ನ ಹೃದಯವನ್ನು ತೆರೆದು ನಿಮ್ಮ ಮುಂದಿಡಲು ಮತ್ತು ನೀವು ಅದನ್ನು ಮನವರಿಕೆ ಮಾಡಲು ಸಾಧ್ಯವಾಗುತ್ತಿದ್ದರೆ! ಒಂದು ವೇಳೆ ಮುಸ್ಲಿಮರು ಇಸ್ಲಾಮಿನ ಇತರ ನೀತಿಗಳನ್ನು ಪಾಲಿಸದೆ ಕೇವಲ ಝಕಾತ್‌ನ ನೀತಿಯನ್ನು ಮಾತ್ರ ಅನುಸರಿಸಿದ್ದರೂ ಅವರ ಪರಿಸ್ಥಿತಿ ಬಹು ಬೇಗನೇ ಬದಲಾಗಬಹುದು. ನೀವು ಝಕಾತನ್ನು ಸಾಮೂಹಿಕವಾಗಿ ವ್ಯಯಿಸುವ ತೀರ್ಮಾನ ಕೈಗೊಂಡರೆ ನಿಮ್ಮ ಪರಿಸ್ಥಿತಿ 24 ಘಂಟೆಗಳೊಳಗೆ ಎಲ್ಲಿಂದ ಎಲ್ಲಿಗೋ ತಲುಪಬಹುದೆಂದು ಖಾತರಿಯಾಗಿ ತಿಳಿದುಕೊಳ್ಳಿ.

## ಇಸ್ಲಾಮಿನ ಉಲ್ಲಂಘನೆ

ಈಗ ನೀವು ಅಪೇಕ್ಷಿತರು, ಮುಲ್ಲಾಗಳು ಇತ್ಯಾದಿ ಜನರಿಗೆ ನೀಡುತ್ತಿರುವ ಝಕಾತನ್ನು ನೀಡಬೇಡಿ ಎಂದು ನಾನು ಹೇಳುತ್ತಿಲ್ಲ. ಅವರಿಗೆ ಕೊಡಿ, ಬದಲಾಗಿ

ಸಾಮೂಹಿಕ ಕೈಗಳಿಂದ ನೀಡಬೇಕೆಂದು ಮಾತ್ರ ಹೇಳುತ್ತಿದ್ದೇನೆ. ನೀವು ಸಾಮೂಹಿಕವಾಗಿ ನೀಡಿದರೆ ಅದು ಇಸ್ಲಾಮೀ ಆದೇಶದ ಉಲ್ಲಂಘನೆ ಯಾಗುತ್ತದೆಯೇ?

## ಸಲಹೆ

ನಾನು ಕನಿಷ್ಠ ಮುಸ್ಲಿಮರಿಗೆ ನೀಡುವ ಸಲಹೆಯೇನೆಂದರೆ, ಅವರು ಝಕಾತನ್ನು ಸರಿಯಾದ ವಿಧಾನದಲ್ಲಿ ವ್ಯಯಿಸಲು ಸಂಘಟನೆಯನ್ನು ರೂಪಿಸಬೇಕು ಮತ್ತು ಇದರಲ್ಲಿ ಪ್ರತಿಯೊಂದು ವರ್ಗ ಮತ್ತು ಜಮಾತಿನ ಪ್ರತಿನಿಧಿಗಳು ಭಾಗವಹಿಸಬೇಕು ಅಥವಾ ಝಕಾತನ್ನು ಇಸ್ಲಾಮೀ ಮೇರೆಗಳೊಳಗೆ ವ್ಯಯಿಸಲು ಪ್ರತಿಯೊಂದು ವರ್ಗದ ವಿಭಾಗವನ್ನು ರಚಿಸಬೇಕು. ಒಂದು ವೇಳೆ ನೀವು ಬಯಸುವ ಜನರಿಗೆ ನಿಮ್ಮ ಝಕಾತ್ ಮೊತ್ತ ವ್ಯಯಿಸಬೇಕೆಂದಾದರೆ ಅವರ ಮಾಹಿತಿಗಳನ್ನು ಸಂಘಟನೆಗೆ ನೀಡಬೇಕು.

ಝಕಾತ್‌ನ ಮೊತ್ತವನ್ನು ಸಾಮೂಹಿಕವಾಗಿ ವ್ಯಯಿಸಲು ಒಂದು ಅಥವಾ ಹೆಚ್ಚು ಪ್ರತಿನಿಧಿ ಸಂಘಟನೆಗಳನ್ನು ರಚಿಸಿ ನಿಮ್ಮ ನಗರದಲ್ಲಿ ಅದರ ಒಂದು ಮಾದರಿಯನ್ನು ಸ್ಥಾಪಿಸಬೇಕು. ಇನ್ಶಾ ಅಲ್ಲಾಹ್ ನಿಮ್ಮನ್ನು ನೋಡಿ ಇತರ ನಗರಗಳಲ್ಲಿಯೂ ಇಂತಹ ಸಂಘಟನೆಗಳು ರಚಿಸಲ್ಪಡಬಹುದು.

